ಖಾಸಗಿ ಪ್ರಸಾರಕ್ಕಾಗಿ ಮಾತ್ರ



ಸಂಪುಟ - 11
ಅಕ್ಟೋಬರ್ - ಡಿಸೆಂಬರ್
2007
ಸಂಚಿಕೆ - 2

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ



ಡಾ. ಶಿವರಾಮ ಕಾರಂತರು
'ಯಕ್ಷಗಾನ ಗೊಂಬೆಯಾಟ'ದ ಗೊಂಬೆಯೊಡನೆ



# ಶಿವರಾಮ ಕಾರಂತ ವೇದಿಕೆ (ರಿ.)


'ಆದರ್ಶ', ನಂ. 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು – 560 032
ದೂರವಾಣಿ : 23336822 / 23336087
ಇ-ಮೇಲ್ : pcchadaga@hotmail.com


## ಕಾರ್ಯಕಾರಿ ಮಂಡಳಿ

| | | |
|---|---|---|
| ಅಧ್ಯಕ್ಷರು | : | ಶ್ರೀಮತಿ ಪ್ರೇಮಾಭಟ್ |
| ಉಪಾಧ್ಯಕ್ಷರು | : | ಶ್ರೀಮತಿ ರಾಧಾ ರಾಮಸ್ವಾಮಿ |
| | | ಶ್ರೀ ಎಸ್. ಆರ್. ವಿಜಯಶಂಕರ |
| ಕಾರ್ಯದರ್ಶಿ | : | ಶ್ರೀ ಪಾ. ಚಂದ್ರಶೇಖರ ಚಡಗ |
| ಸಹಕಾರ್ಯದರ್ಶಿಗಳು | : | ಡಾ|| ಆರ್.ಆರ್. ಪಾಂಗಾಳ್ |
| | | ಶ್ರೀಮತಿ ಶಾಂತಾಕುಮಾರಿ |
| ಖಜಾಂಚಿ | : | ಶ್ರೀ ಎ. ವಾಸುದೇವರಾವ್ |

## ಕಾರ್ಯಕಾರಿ ಸಮಿತಿಯ ಸದಸ್ಯರು

ಸರ್ವಶ್ರೀ

1. ಬಿ.ವಿ. ಕೆದಿಲಾಯ
2. ಸಾ.ರಾ. ವಾರಂಬಳ್ಳಿ
3. ಬಿ. ಸದಾಶಿವರಾವ್
4. ಹೆಚ್. ವಿ. ಶಿವಸ್ವಾಮಿ
5. ಎ.ಎಸ್. ಭಟ್
6. ಎ.ಆರ್. ರಾಮಯ್ಯ
7. ಬಿ.ಡಿ. ಶೆಣೈ
8. ಕೆ. ಎನ್. ಶ್ರೀಕಂಠಯ್ಯ
9. ಶ್ರೀಮತಿ ವನಜಾ ರಾಜನ್

ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ
ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

ಖಾಸಗಿ ಪ್ರಸಾರಕ್ಕೆ ಮಾತ್ರ



# ಹಣತೆ


ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ 11 ಅಕ್ಟೋಬರ್ - ಡಿಸೆಂಬರ್ 2007 ಸಂಚಿಕೆ - 2


## ಈ ಸಂಚಿಕೆಯಲ್ಲಿ..........

ಪ್ರಿಯ ಓದುಗ,

## ಕಾರಂತರಿಲ್ಲದ ಒಂದು ದಶಕ

ದಿನಾಂಕ ೯.೧೨.೨೦೦೭ಕ್ಕೆ ಕೋಟ ಶಿವರಾಮ ಕಾರಂತರು ನಮ್ಮ ನ್ನಗಲಿ ೧೦ ವರ್ಷಗಳೇ ಸಂದುಹೋಗುತ್ತವೆ. ಈ ಅವಧಿಯಲ್ಲಿ ಕನ್ನಡದಲ್ಲಿ ಕಾರಂತರ ಸಾಧನೆಯನ್ನು ಮೀರಿದ ಯಾವ ಲೇಖಕನೂ, ಕಾರಂತರಂತೆ ನುಡಿದಂತೆ ನಡೆಯುತ್ತಿರುವ ಮಹಾವ್ಯಕ್ತಿಯೂ ನನ್ನ ಗಮನಕ್ಕೆ ಬಂದಿಲ್ಲ. ನಿಮ್ಮ ಗಮನಕ್ಕೆ ಬಂದಿದ್ದರೆ ದಯಮಾಡಿ ನನ್ನ ಅಜ್ಞಾನವನ್ನು ದೂರಮಾಡಿ.

ದಿನಾಂಕ ೯.೧೨.೨೦೦೭ರ ಬೆಳಿಗ್ಗೆ ಶಿವರಾಮ ಕಾರಂತರ ಕುರಿತ, ಒಂದು ವ್ಯಾಸಂಗ ಗೋಷ್ಠಿಯನ್ನು ಆರ್.ಟಿ.ನಗರದ ತರಳಬಾಳು ಕೇಂದ್ರದ ಎರಡನೇ ಮಹಡಿಯಲ್ಲಿರುವ ಗ್ರಂಥಾಲಯದಲ್ಲಿ ಹಮ್ಮಿಕೊಂಡಿದ್ದೇವೆ. ಆ ದಿನ ಶ್ರೀ ಬಿ.ವಿ. ಕೆದಿಲಾಯರು ಕಾರಂತರ ''ಸಮೀಕ್ಷೆ'' ಕಾದಂಬರಿಯ ಕುರಿತು ಹಾಗೂ ಶ್ರೀಮತಿ ಶಾಂತಾ ಕುಮಾರಿಯವರು ''ಕಾರಂತರ ಕೃತಿಗಳಲ್ಲಿ ದಾಂಪತ್ಯದ ಶೀಲ'' ಎನ್ನುವ ವಿಷಯದ ಮೇಲೆ ಪ್ರಬಂಧಗಳನ್ನು ಮಂಡಿಸಲಿದ್ದಾರೆ. ತಮ್ಮ ಕಾಲದಿಂದ ಬಲುಮುಂದೆ ಇದ್ದ ಕಾರಂತರ ಕೃತಿಗಳ ಓದು ಇಂದಿಗೂ ಪ್ರಸ್ತುತವೇ? ಬದಲಾಗುತ್ತಿರುವ/ಬದಲಾಗಬೇಕಾದ ಜೀವನ ಮೌಲ್ಯಗಳನ್ನು ನವೋದಯಕಾಲದಲ್ಲಿ ಗುರುತಿಸಿದ ಏಕೈಕ ಕನ್ನಡ ಸಾಹಿತಿ ಕಾರಂತರೆಂದೇ ನನ್ನ ನಂಬಿಕೆ. ತಮ್ಮ ವೈಯಕ್ತಿಕ ಜೀವನದಲ್ಲಿ ಪುರಾತನ ಮೌಲ್ಯಗಳನ್ನು ಅನುಸರಿಸುತ್ತಾ, ಪುರಾತನ ಮೌಢ್ಯಗಳನ್ನು ಧಿಕ್ಕರಿಸಿದ ಹೆಮ್ಮೆ ಕಾರಂತರದು. ಇಂತಹ ಸಾಹಿತಿಯನು ''ಮತ್ತೊಮ್ಮೆ ಹುಟ್ಟಿ ಬಾ'' ಎಂದರೂ ಕಾರಂತರ ಆತ್ಮ (ಅದೊಂದು ಇನ್ನೂ ಇದ್ದರೆ) ''ಹುಚ್ಚಾ ನೀನು ಮಾಡುವ ಕೆಲಸ ನೀನು ಮಾಡು, ನಾನು ಮಾಡಬೇಕಾದ್ದನೆಲ್ಲಾ ಮಾಡಿಯೇ ಈ ಜಗತ್ತಿನಿಂದ ನಿರ್ಗಮಿಸಿದ್ದೇನೆ'' ಎಂದು ಹೇಳೀತು. ಕಾರಂತರ ಕೃತಿಗಳ ಉಳಿವಿಗೆ ಹೋರಾಡುವ ತಂಗಿ, ಶ್ರೀಮತಿ ಮಾಲಿನಿ ಮಲ್ಯರಿಗೂ ಇಂತಹ ವಿಶ್ವಾಸವಿಲ್ಲ. ಕಾರಂತರ ಮಕ್ಕಳಂತೂ ಖಂಡಿತಾ ಕಾರಂತರ ಸರಕನ್ನು ತಮ್ಮ ಬಂಡವಾಳವಾಗಿ ಮಾಡಿಕೊಂಡು ಮೆರೆಯುವವರೇ ಅಲ್ಲ. ದಿನಾಂಕ ೧೦.೧೦.೨೦೦೭ ರಂದು ನಾವು

ಆಚರಿಸಿದ ಕಾರಂತರ ಹುಟ್ಟುಹಬ್ಬದಲ್ಲಿ ಭಾಗವಹಿಸಿದ ಶ್ರೀಮತಿ ಕ್ಷಮಾರಾವ್ ಅವರ ಭಾಷಣದ ಸಾರಾಂಶ ಈ ಹಣತೆಯಲ್ಲಿ ಅಚ್ಚಾಗಿದೆ. (ಪತ್ರಿಕಾ ವರದಿಗಳ ರೂಪದಲ್ಲಿ).

ಶಿವರಾಮ ಕಾರಂತ ವೇದಿಕೆಯ ಕಾರ್ಯವ್ಯಾಪ್ತಿ ಅಖಿಲ ಕರ್ನಾಟಕ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ. ೧೯೯೨-೯೩ ರಲ್ಲಿ ನಾನು ಕಂಡ ಕನಸುಗಳು ನಿಧಾನವಾಗಿಯಾದರೂ ನನಸಾಗುತ್ತಿವೆ. ನಮ್ಮ ಸ್ಥಾಪಕ ಅಧ್ಯಕ್ಷರಾದ ತೊ.ಸು.ಸುಬ್ರಹ್ಮಣ್ಯಂರವರು ೧೯೯೪ರಲ್ಲಿ ನಿಧನರಾದುದ್ದು ತಮಗೆ ತುಂಬಲಾರದ ನಷ್ಟ ಅವರ ಮಗ ಸಂಜಯ, ಪತ್ನಿ ಶ್ರೀಮತಿ ನಾಗಲಕ್ಷ್ಮಿ, ಸೊಸೆ ಶ್ರೀಮತಿ ಅನುಪಮಾ ನಮ್ಮ ಬೆಂಬಲಕ್ಕೆ ಮುಂದೆ ಬರುತ್ತಿರುವುದು ನಮ್ಮ ಸೌಭಾಗ್ಯ. ತೊ. ಸು. ಸುಬ್ರಹ್ಮಣ್ಯಂ ಅವರ ಹೆಸರಿನಲ್ಲಿ ದತ್ತಿನಿಧಿಯನ್ನು ಸ್ಥಾಪಿಸಲು ಅವರೀಗ ಮುಂದೆ ಬಂದಿದ್ದಾರೆ. ನಮ್ಮ ಹಾಲೀ ಅಧ್ಯಕ್ಷರು ಈಗಾಗಲೇ ತಮಗೆ ಬಂದ ಪ್ರಶಸ್ತಿಯ ಮೊತ್ತ ರೂ.೫೦೦೦/-ವನ್ನು ವೇದಿಕೆಗೆ ಕೊಟ್ಟು ದತ್ತಿ ನಿಧಿಯೊಂದನ್ನು ಸ್ಥಾಪಿಸಿದ್ದಾರೆ.

ಹಿರಿಯ ಸಾಹಿತಿ ದಿ. ಎ.ಆರ್.ಕೃಷ್ಣಶಾಸ್ತ್ರಿಗಳ ಮೊಮ್ಮಗ, ನಮ್ಮ ವೇದಿಕೆಯ ಸಕ್ರಿಯ ಸದಸ್ಯ, ಶ್ರೀ ಸಿ.ಆರ್.ಸತ್ಯ ಅವರು ಟಾಟಾ ಅಡ್ವಾನ್ಸ್ ಮೆಟೀರಿಯಲ್ಸ್ ನಲ್ಲಿ ದೊಡ್ಡ ಹುದ್ದೆಯಲ್ಲಿರುವರು. ಬಿಡುವಿಲ್ಲದ ಚಟುವಟಿಕೆಗಳ ನಡುವೆ ''ಅಪರಂಜಿ''ಗೆ ಹಾಸ್ಯ ಲೇಖನಗಳನ್ನು ಬರೆಯುತ್ತಾ ಬಂದಿದ್ದಾರೆ. ಆ ಲೇಖನಗಳ ಸಂಗ್ರಹ ಸದ್ಯದಲ್ಲಿಯೇ ಅಚ್ಚಾಗಿ ಹೊರಬರಲಿದೆ.

ಈ ಸಂಚಿಕೆಯಲ್ಲಿ ಕಾರಂತರ ಕುರಿತು ದೆಹಲಿ ಕನ್ನಡ ಸಂಘದ ಅಧ್ಯಕ್ಷ ಡಾ.ಪುರುಷೋತ್ತಮ ಬಿಳಿಮಲೆಯವರು ಬರೆದು 'ಅಭಿಮತ' ದಲ್ಲಿ ಅಚ್ಚಾದ ಲೇಖನದ ಮರುಮುದ್ರಣಕ್ಕೆ ಅವರು ತಮ್ಮ ಒಪ್ಪಿಗೆಯನ್ನು ತಿಳಿಸಿದ್ದಾರೆ, ಅವರಿಗೆ ನಮ್ಮ ಕೃತಜ್ಞತೆಗಳು. ಡಾ.ಬಿಳಿಮಲೆಯವರು ದೂರದ ದೆಹಲಿಯಲ್ಲಿ ಕನ್ನಡದ ಪತಾಕೆಯನ್ನು ಎತ್ತಿ ಹಿಡಿಯುತಿದ್ದಾರೆ. ಈ ದಿಸೆಯಲ್ಲಿ ಸ್ಮರಿಸಬೇಕಾದ ಇನ್ನೊಂದು ಹೆಸರು ಶ್ರೀ ಬಾ.ಸಾಮಗ ಮುಂಬೈಯಲ್ಲಿಯೂ ವಿವಿಧ ಕನ್ನಡ ಸಂಘಗಳೂ ಕನ್ನಡದ ಮೇಲಿನ ನಿರ್ವ್ಯಾಜ ಪ್ರೇಮದಿಂದ ಕೆಲಸ ಮಾಡುತ್ತಿವೆ. ಆದರೆ ನಾವು ಕರ್ನಾಟಕದ ರಾಜಧಾನಿಯ ಗೌರವಾನ್ವಿತ ಪ್ರಜೆಗಳು ಏನು ಮಾಡುತ್ತಿದ್ದೇವೆ? ಹೇಳಲು ನನಗೆ ನಾಚಿಕೆಯಾಗುತ್ತದೆ. ಅಡಿಗೆ ಮನೆಯಿಂದಲೇ ಕನ್ನಡವನ್ನು ಹೊಡೆದೋಡಿಸಿದ ಒಂದು ಮಾದರಿ ಹೀಗಿದೆ.

"ಈ ದಿನ ನನ್ನ ಹಸ್ಬೆಂಡು ಊಟಕ್ಕೆ ಬರುವುದಿಲ್ಲಾಂತೆ ಅದಕ್ಕೆ ಫ್ರಿಜ್ ನಲ್ಲಿ ಇಟ್ಟಿದ್ದ ನಿನ್ನೆಯ ಸಾರಿಗೆ ಸ್ವಲ್ಪ ಈರುಳ್ಳಿ ಫ್ರೈ ಮಾಡಿ, ಒಂದರೆಡು ಪೊಟಾಟೊ ಹಾಕಿ ಅದನ್ನು ಸಾಂಬಾರ್ ಆಗಿ ಕನ್ವರ್ಟ್ ಮಾಡುತ್ತೇನೆ. ಹೇಗೂ ಮಾರ್ನಿಂಗ್ ಮಾಡಿದ ಇಡ್ಲಿ ಇವೆ. ಅವನ್ನೆ ಈ ಸಾಂಬಾರ್ ಒಟ್ಟಿಗೆ ತಿನ್ನುತ್ತೇನೆ, ಹೇಗಿದೆ ನನ್ನ ಐಡಿಯಾ" ಅನ್ನುತ್ತಾರೆ ಪಕ್ಕದ ಪದ್ದಕ್ಕನ ಹೆಮ್ಮೆಯ ಸೊಸೆ ಕಾನ್ವೆಂಟಿನಲ್ಲಿ ಓದಿ (ಕನ್ನಡ ಎಂ.ಎ) ಮಾಡಿದ ಸೌಭಾಗ್ಯ. (ಇದು ಕನ್ನಡದ ದೊಡ್ಡ ದೌರ್ಭಾಗ್ಯ!)

ದಿನಾಂಕ ೧೬.೧೨.೨೦೦೭ ರಂದು ಧಾರವಾಡದ ಅವನಿ ರಸಿಕರ ರಂಗದ ಮತ್ತು ಹಾವೇರಿಯ ಗೆಳೆಯರ ಬಳಗದ ಸಹಯೋಗದೊಂದಿಗೆ ಹಾವೇರಿಯ ಶ್ರೀಮತಿ ಮಣಿ ಬಾಯಿ ಲೋಡ್ಯಾ ಸಭಾಂಗಣದಲ್ಲಿ ಶಿವರಾಮ ಕಾರಂತರ ಸ್ಮರಣೆಯನ್ನು ಹಮ್ಮಿಕೊಳ್ಳಲಾಗಿದೆ. ಬೆಂಗಳೂರಿನಿಂದ ಉಡುಪಿಯ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಅಲ್ಲಿಂದ ಹಾವೇರಿಗೆ ಹೋಗುವ ಯೋಜನೆ ಹಾಕಿಕೊಂಡಿದ್ದೇನೆ, ಕೆಟ್ಟಿರುವ ಕರ್ನಾಟಕದ ರಸ್ತೆಗಳಲ್ಲಿ ಕಾಲಿಗೆ ಗಾಲಿಕಟ್ಟಿಕೊಂಡು ಊರೂರು ಸುತ್ತುವ ಆಸೆ ಆ ವಯಸ್ಸಿನಲ್ಲಿ ನಿಮಗೇಕೆ" ಎಂದು ಪ್ರಶ್ನಿಸುವವರು ಬಹಳ ಜನರಿದ್ದಾರೆ. ಕಾರಂತರು ಇಪ್ಪತ್ತನೆಯ ಶತಮಾನದ ಎರಡು-ಮೂರನೆಯ ದಶಕಗಳಲ್ಲಿ ಮಾಡಿದ ಕೆಲಸಗಳೇ ನನಗೆ ಪ್ರೇರಣೆ. ಅವರ "ಭೂತ" ಶರೀರವನ್ನು ಪ್ರವೇಶಿಸಬಹುದೆಂಬ ಅನುಮಾನ ನನ್ನ ಗೆಳೆಯರಿಗಿದೆ.

ಶಿವರಾಮ ಕಾರಂತ ವೇದಿಕೆ, ಬೆಂಗಳೂರು ಹಾಗೂ ಶಿವರಾಮ ಕಾರಂತ ರಿಸರ್ಚ್ ಫೌಂಡೇಷನ್, ಸಾಲಿಗ್ರಾಮಗಳ ಸಂಯುಕ್ತ ಆಶ್ರಯದಲ್ಲಿ Thus Spake Karanth ಎನ್ನುವ ಇಂಗ್ಲಿಷ್ ಕಿರು ಹೊತ್ತಿಗೆ ಶೀಘ್ರದಲ್ಲಿಯೇ ಬರಲಿದೆ. ಈ ಎರಡು ಸಂಸ್ಥೆಗಳು ಸೇರಿ ಶಿವರಾಮ ಕಾರಂತ Website ಆರಂಭಿಸುವ ಯೋಜನೆ ಇದೆ. ಸಾಸ್ತಾನದ ಶಿವರಾಮ ಕಾರಂತ ರಂಗ ಸ್ಥಳ ನಿಧಾನವಾಗಿಯಾದರೂ ರಂಗಭೂಮಿಯಾಗಿ ಪರಿವರ್ತಿತವಾಗುತ್ತಿದೆ. ಎಲ್ಲಾ ಕಾರಂತಾಭಿಮಾನಿಗಳೂ ಹೆಗಲಿಗೆ ಹೆಗಲು ಕೊಟ್ಟು ದುಡಿಯಬೇಕೆಂದೇ ನನ್ನ ಆಶಯ. ನಮ್ಮ ನಮ್ಮೊಳಗೆ ಈ ಸ್ಪರ್ಧಾಮನೋಭಾವ ಬೇಡ.

ದಿನಾಂಕ ೦೭.೦೧.೨೦೦೮ ರಂದು ಶಿವರಾಮ ಕಾರಂತ ವೇದಿಕೆ ೧೫ ವರ್ಷಗಳ ಸಾರ್ಥಕ ಅಸ್ತಿತ್ವವನ್ನು ಮುಗಿಸಿ ೧೬ರ ನವಯೌವನದಲ್ಲಿ ಕಾಲಿರಿಸುತ್ತಿದೆ.

ಬಾಲಗ್ರಹಪೀಡೆಯಿಂದ ಮುಕ್ತಗೊಂಡ ಈ ವೇದಿಕೆ ಇದೀಗ ಯೌವನದ ಅದಮ್ಯ ಉತ್ಸಾಹದೊಂದಿಗೆ ಕನ್ನಡದ ಕೈಂಕರ್ಯವನ್ನು ಮಾಡುತ್ತಿದೆ. ೧೭.೦೧.೨೦೦೮ ರಂದು ತರಳಬಾಳು ಕೇಂದ್ರದಲ್ಲಿ ನಡೆಯಲಿರುವ ಹದಿನೈದನೆಯ ವಾರ್ಷಿಕೋತ್ಸವ ೨೦೦೨ರಲ್ಲಿ ನಡೆದ ನಮ್ಮ ದಶಮಾನೋತ್ಸವಕ್ಕಿಂತಲೂ ವೈಭವಯುತವಾಗಿ ನಡೆದೀತು,ನಡೆಯಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತಾ ನನ್ನ ನುಡಿಗಳನ್ನು ಮುಗಿಸುತ್ತೇನೆ.

ಇಂತು ನಿಮ್ಮ

**ಪಾ. ಚಂದ್ರಶೇಖರ ಚಡಗ**

ವ್ಯವಸ್ಥಾಪಕ ಸಂಪಾದಕ

# ಶಿವರಾಮ ಕಾರಂತರ ಅನನ್ಯತೆ

-ಡಾ. ಪುರುಷೋತ್ತಮ ಬಿಳಿಮಲೆ,

ನವದೆಹಲಿ.

ಕಾರ್ಯ-ಕಾರಣ ಸಂಬಂಧಗಳ ಆಧಾರದ ಮೇಲೆ ಜಗತ್ತನ್ನು ವಿಶ್ಲೇಷಿಸುವುದು 20ನೇ ಶತಮಾನದ ಒಂದು ಪ್ರಮುಖ ಗುಣ. ಅದನ್ನೇ 'ವೈಜ್ಞಾನಿಕ ಮನೋಧರ್ಮ' 'ವೈಚಾರಿಕತೆ' ಎಂಬಿತ್ಯಾದಿ ಪದಗಳ ಮೂಲಕ ವಿವರಿಸಲಾಯಿತು. ಏನಾದರೂ ಒಂದು ಘಟನೆ ನಡೆದರೆ ಅದಕ್ಕೊಂದು ಕಾರಣ ಇರಲೇಬೇಕು ಎಂದು ಅಲ್ಲಿ ತರ್ಕಿಸಲಾಗುತ್ತದೆ. 'ಈ ಜಗತ್ತಿನ ಅಸ್ತಿತ್ವಕ್ಕೆ ದೇವರು ಕಾರಣ' ಎಂದು ಯಾರಾದರೂ ಹೇಳಿದರೆ 'ಹಾಗಾದರೆ ದೇವರಿಗೆ ಯಾರು ಕಾರಣ?' ಎಂದು ಇಲ್ಲಿ ಪ್ರಶ್ನಿಸಲಾಗುತ್ತದೆ. ಇಂಥ ಚಿಂತನಾ ಕ್ರಮವೊಂದು ಸೃಷ್ಟಿಸಬಹುದಾದ ವ್ಯಕ್ತಿತ್ವವೊಂದರ ಅತ್ಯುತ್ತಮ ಸಂಕೇತವೇ ಡಾ. ಶಿವರಾಮ ಕಾರಂತ. (1902-1997)

ಈ ಬಗೆಯ ವೈಚಾರಿಕತೆ ಇರುವವರಿಗೆ ಭಾವುಕವಾದ ಕವನಗಳನ್ನು ಬರೆಯಲಾಗುವುದಿಲ್ಲ. ಗದ್ಯವೇ ಅವರ ಪ್ರಮುಖ ಮಾಧ್ಯಮ. ಡಾ. ಶಿವರಾಮ ಕಾರಂತರಿಗಾದರೂ ಅಷ್ಟೆ. 'ಸೀಳ್ಗವನಗಳು', ರಾಷ್ಟ್ರಗೀತೆ, ಸುಧಾಕರ-ಎಂಬ ಹೆಸರಿನ ಕವನ ಸಂಕಲನಗಳನ್ನು ಅವರು ಪ್ರಕಟಿಸಿರುವರಾದರೂ ಕನ್ನಡಿಗರು ಅವನ್ನು ಗಂಭೀರವಾಗಿ ಸ್ವೀಕರಿಸಿಲ್ಲ.

**ಕಾರಂತರು ಬರೆಯದ ವಿಷಯವಿಲ್ಲ:**

1902ರ ಅಕ್ಟೋಬರ್ 10ರಂದು ಕುಂದಾಪುರ ಸಮೀಪದ ಕೋಟದಲ್ಲಿ ಜನಿಸಿದ ಕಾರಂತರು ಕುಂದಾಪುರದಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಪೂರೈಸಿ, ಮುಂದೆ ವಿದ್ಯಾಭ್ಯಾಸವನ್ನು ಅರ್ಧದಲ್ಲಿ ಬಿಟ್ಟು ಸ್ವಾತಂತ್ರ್ಯ ಚಳುವಳಿಗೆ ಧುಮುಕಿದರು. ವಿವಾಹದ ಅನಂತರ ಕೋಟ ಬಿಟ್ಟು ಪುತ್ತೂರು ಸೇರಿದ ಅವರು ಅಲ್ಲಿ ತನ್ನ ಪ್ರಖ್ಯಾತವಾದ 'ಹರ್ಷ ಪ್ರಕಾಶನ'ವನ್ನು ಆರಂಭಿಸಿ ತನ್ನ ಬದುಕಿನ ಅವಧಿಯಲ್ಲಿ ಇಷ್ಟೆಲ್ಲಾ ಸಾಧಿಸಲು ಸಾಧ್ಯವೇ ಎಂದು ವಿಸ್ಮಯ ಪಡುವಷ್ಟು ಕೆಲಸ ಮಾಡಿದರು. ಹೀಗಾಗಿ ಕಾರಂತರ ಬಗ್ಗೆ ಬರೆಯುವಾಗ 'ಆಡು ಮುಟ್ಟದ ಸೊಪ್ಪಿಲ್ಲ ಕಾರಂತರು ಬರೆಯದ ವಿಷಯವಿಲ್ಲ' 'ಕಾರಂತರು ಒಬ್ಬ ವ್ಯಕ್ತಿಯಲ್ಲ ಅವರು ಒಂದು ಸಂಸ್ಥೆ' 'ಅವರೇ ಒಂದು ವಿಶ್ವವಿದ್ಯಾಲಯ', 'ಕಾರಂತರು ನಡೆದಾಡುವ ವಿಶ್ವಕೋಶ' -ಎಂಬಿತ್ಯಾದಿ ಮಾತುಗಳೆಲ್ಲ ಸಹಜವಾಗಿ ಕೇಳಿಬಂದವು. ಬಹುಶಃ ಕಾರಂತರು ಇಂಥ ಮಾತುಗಳಿಗೆಲ್ಲ ಕಿವಿಗೊಡುತ್ತಾ ಬದುಕಿದವರಲ್ಲ.

ಒಂದು ಬಗೆಯ ನಿರಂತರ ಪ್ರಯೋಗಶೀಲತೆ ಕಾರಂತರ ಗುಣ. ಅವರ ಇಡೀ ಬದುಕೇ ಒಂದು ಪ್ರಯೋಗಶಾಲೆಯಂತೆ ತೋರುತ್ತದೆ. ತಾವು ಹೇಳಿದ್ದನ್ನು, ಬರೆದದ್ದನ್ನು ತಾವೇ ಪ್ರಶ್ನಿಸುತ್ತಾ, ಅವರು ಮತ್ತೆ ಮತ್ತೆ ಬೆಳೆಯುತ್ತಾ ಹೋದರು. ಇದನ್ನು ಗಮನಿಸಿದ ನಾಡಿನ ಜನತೆ ಅವರಿಗೆ ಜ್ಞಾನಪೀಠ ಪ್ರಶಸ್ತಿ, ಗೌರವ ಡಾಕ್ಟರೇಟ್, ಮತ್ತಿತರ ಪ್ರತಿಷ್ಠಿತ ಪ್ರಶಸ್ತಿಗಳನ್ನು ನೀಡಿ ಗೌರವಿಸಿದೆ. ಅವರು ಬೇರೆ ಬೇರೆ ಸಮ್ಮೇಳನಗಳಲ್ಲಿ ಮಾಡಿದ ಅಧ್ಯಕ್ಷ ಭಾಷಣಗಳು, ಮಾಡಿದ ಉಪನ್ಯಾಸಗಳ ಲೆಕ್ಕ ಇಟ್ಟವರಿಲ್ಲ. ಇಂದಿರಾಗಾಂಧಿ ಅವರ ಸರ್ವಾಧಿಕಾರೀ ಧೋರಣೆಯನ್ನು ಧಿಕ್ಕರಿಸಿದ ಅವರು ತನಗೆ ನೀಡಿದ 'ಪದ್ಮಭೂಷಣ ಪ್ರಶಸ್ತಿ'ಯನ್ನು ಕೇಂದ್ರ ಸರಕಾರಕ್ಕೆ ಹಿಂದಿರುಗಿಸಿಬಿಟ್ಟಿದ್ದರು.

ಸಾಹಿತ್ಯ, ರಂಗಭೂಮಿ, ಚಲನಚಿತ್ರ, ಪ್ರವಾಸ, ವಿಜ್ಞಾನ, ಚಿತ್ರಕಲೆ, ಸಂಗೀತ, ಶಿಕ್ಷಣ, ರಾಜಕೀಯ, ಮಕ್ಕಳು, ಪತ್ರಿಕೋದ್ಯಮ, ಭಾಷೆ, ಪ್ರಾಣಿ ಪ್ರಪಂಚ, ಪರಿಸರ ಹೋರಾಟ, ಶಿಲ್ಪಕಲೆ, ಯಕ್ಷಗಾನ – ಹೀಗೆ ಕಾರಂತರ ಆಸಕ್ತಿಯ ಕ್ಷೇತ್ರಗಳು ಹಲವು. ಈ ಕಾರಣಕ್ಕೇನೇ ಅವರು ತಮ್ಮ ಆತ್ಮ ಚರಿತ್ರೆಯನ್ನು 'ಹುಚ್ಚು ಮನಸಿನ ಹತ್ತು ಮುಖಗಳು' ಎಂದು ಕರೆದುಕೊಂಡರು. 'ಬದುಕಿನ ಎಲ್ಲ ಸ್ತರಗಳನ್ನು ಅನುಭವಿಸಿ ನೋಡಬೇಕು' ಎಂಬ ಅವರ ಹಠ, ಅವರನ್ನು 'ವಾಸ್ತವವಾದಿ' ಪರಂಪರೆಯ ಬಹುದೊಡ್ಡ ಲೇಖಕನನ್ನಾಗಿ ಮಾಡಿತು. ಅವರು ತಮ್ಮ ಬದುಕಿನ ಕೊನೆಯ ಉಸಿರಿನವರೆಗೆ ಅಧ್ಯಾಪಕ, ವಿದ್ಯಾರ್ಥಿ, ಪಂಡಿತ, ಪಾಮರ..... ಹೀಗೆ ಎಲ್ಲವೂ ಆಗಿದ್ದರು.

**ದೇವರಲ್ಲಿ ನಂಬಿಕೆ ಇಲ್ಲ**

ಕಾರಂತರು ದೇವರನ್ನು ನಂಬುತ್ತಿರಲಿಲ್ಲ. ವಿರಕ್ತಿ ಮೂಲದ, ಜೀವವಿರೋಧಿಯಾದ ಧಾರ್ಮಿಕ ಮೌಲ್ಯಗಳಲ್ಲೂ ಅವರಿಗೆ ವಿಶ್ವಾಸ ಇರಲಿಲ್ಲ. ಅನೇಕರು ಹೇಳುವುದುಂಟು – ''ಈಗ ಆತ ಹುಡುಗ, ಪ್ರಾಯ ಆದಾಗ ದೇವರನ್ನು ನಂಬುತ್ತಾನೆ ನೋಡಿ'' ಅಂತ. ಹಾಗೆ ಹೇಳುವವರು ಕಾರಂತರನ್ನು ಓದಬೇಕು. ''ದೇವರು ಅಂದರೆ ನನ್ನ ಕಣ್ಣ ಮುಂದೆ ಬರುವುದು ಕೆಲವು ಕ್ಯಾಲೆಂಡರಿನ ಚಿತ್ರಗಳು''ಎಂದು ಅವರು ಹೇಳಿದ್ದುಂಟು. ಹಾಗಂತ 'ನನಗೆ ದೇವರಲ್ಲಿ ನಂಬಿಕೆಯಿಲ್ಲ' ಎಂದು ಹೇಳಿಕೊಂಡು ಅವರು ಊರು ಸುತ್ತಲಿಲ್ಲ. ಅವರ ನಿಷ್ಠೆ ಇಡೀ ಬ್ರಹ್ಮಾಂಡವನ್ನು ಒಳಗೊಳ್ಳುವಷ್ಟು ಉದಾರವಾಗಿದ್ದುದರಿಂದಾಗಿ, ದೇವರನ್ನು ನಂಬುವವರನ್ನು ಅವರು ದ್ವೇಷಿಸುತ್ತಿರಲಿಲ್ಲ. ''ಬ್ರಹ್ಮಾಂಡದ ಅಸಂಖ್ಯ ನಕ್ಷತ್ರಗಳು ಮತ್ತು ಗ್ರಹಗಳ ನಡುವೆ ನಮ್ಮ ಭೂಮಂಡಲವೂ ಒಂದು. ಅದರಲ್ಲಿಯೂ ಮತ್ತೆ ಅಸಂಖ್ಯ ಜೀವಜಂತುಗಳು, ಮನುಷ್ಯನು ಅಂಥ ಗುಂಪುಗಳಲ್ಲಿ ಒಬ್ಬ. ಹಾಗೇ ಮಾನವರಲ್ಲಿಯೂ ಅಸಂಖ್ಯ ವಿಧಗಳು.... ಹೀಗೆ ಒಬ್ಬ ವ್ಯಕ್ತಿಯನ್ನು ಭೂಮಂಡಲ ಬ್ರಹ್ಮಾಂಡಗಳ ನಡುವೆ ಇರಿಸಿದಾಗ

ಆತನೆಷ್ಟು ಸಣ್ಣವ ಎಂಬ ವಿಷಯ ತಿಳಿಯುತ್ತದೆ. ಇದು ಆತನಲ್ಲಿ ವಿನೀತ ಭಾವ ಮೂಡಿಸಬೇಕು'' ಎಂದು ಅವರು ಭಾವಿಸಿದ್ದರು. ಕಾರಂತರ ವಿಚಾರಧಾರೆ ಅರ್ಥವಾಗಬೇಕಾದರೆ ನಾವು ಅವರು ಬರೆದ 'ಬಾಳ್ವೆಯೇ ಬೆಳಕು', 'ಹುಚ್ಚು ಮನಸಿನ ಹತ್ತು ಮುಖಗಳು' ಮತ್ತು 'ಸ್ಮೃತಿ ಪಟಲದಿಂದ' ಭಾಗ-1,2,3'' ಓದಬೇಕು. ಕರಾವಳಿ ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಪುಟ್ಟ ಹುಡುಗನೊಬ್ಬ ತನ್ನ ಅನುಭವದ ಹಾಗೂ ವೈಚಾರಿಕತೆಯ ಮಟ್ಟಗಳನ್ನು ಹಂತ ಹಂತವಾಗಿ ವಿಸ್ತರಿಸಿಕೊಂಡ ಬಗೆಯ ಕುರಿತು ಅಲ್ಲಿ ಅದ್ಭುತವಾದ ವಿವರಣೆಗಳಿವೆ. ಮಗುವಿನ ಮುಗ್ಧತೆ, ವಿಜ್ಞಾನಿಯ ಕುತೂಹಲ, ಕಲಾವಿದನ ಸೂಕ್ಷ್ಮತೆ, ತತ್ವಜ್ಞಾನಿಯ ತರ್ಕ, ಕವಿಯ ಭಾವುಕತೆಗಳೆಲ್ಲ ಮೇಳೈಸಿದ ವರ್ಣರಂಜಿತ ವ್ಯಕ್ತಿತ್ವ ಅವರದು.

**ವ್ಯಂಗ್ಯ-ವಿಡಂಬನೆಗಳ ಹರಿಕಾರ:**

ಕಾರಂತರ ಭಾಷಣಗಳನ್ನು ಕೇಳಿದವರಿಗೆ ಅವರ ವ್ಯಂಗ್ಯ-ವಿಡಂಬನೆ-ಸಿಟ್ಟಿನ ಅರಿವಾಗದಿರದು. ನಾನು ವಿದ್ಯಾರ್ಥಿಯಾಗಿದ್ದಾಗ ಅವರನ್ನು ಕಾಲೇಜಿಗೆ ಕರೆಯಿಸಿಕೊಳ್ಳಲಾಗಿತ್ತು. ಕಾಲೇಜಿನ ಪ್ರಾಂಶುಪಾಲರು ಬಹಳ ವಿನಯದಿಂದ ''ಡಾ.ಕಾರಂತರು ದಯವಿಟ್ಟು ವೇದಿಕೆಗೆ ಬಂದು ಆಸನವನ್ನು ಅಲಂಕರಿಸಬೇಕು'' ಎಂದರು. ನೇರವಾಗಿ ವೇದಿಕೆಗೆ ಬಂದ ಕಾರಂತರು ಅಲ್ಲಿರಿಸಲಾದ ಮರದ ಕುರ್ಚಿಯನ್ನು ಅಲ್ಲಾಡಿಸಿ ''ಈ ಮರದ ಕುರ್ಚಿ ಆಸನವೇ? ಇದನ್ನು ನಾನು ಅಲಂಕರಿಸಬೇಕೇ'' ಎಂದು ವ್ಯಂಗ್ಯವಾಗಿ ಕೇಳಿಯೇ ಬಿಟ್ಟರು. ಹಾಗೆ ಕೇಳುವಾಗ ಅವರಲ್ಲಿ ಒಂದು ಬಗೆಯ ಹಾಸ್ಯ ಪ್ರಜ್ಞೆಯೂ ಇದ್ದುದರಿಂದ ನಮಗ್ಯಾರಿಗೂ ಕಾರಂತರ ಮೇಲೆ ಸಿಟ್ಟು ಬಂದಿರಲಿಲ್ಲ. ಭಾಷೆಯನ್ನು ಅತಿಯಾಗಿ ಬಳಸುವುದು, ಧರ್ಮದ ಹೆಸರಿನಲ್ಲಿ ಜನರನ್ನು ಶೋಷಣೆ ಮಾಡುವುದು, ಹೇಳುವುದೊಂದು ಮಾಡುವುದೊಂದು ಇಂಥ ವಿಷಯಗಳ ಬಗ್ಗೆ ಅವರು ಚಾಟಿಯೇಟು ನೀಡುತ್ತಿದ್ದರು. ಕಾರಂತರ ಈ ಬಗೆಯ ಮುಖವನ್ನು ತಿಳಿಯ ಬಯಸುವವರು ಅವರು ಬರೆದ 'ಹಳ್ಳಿಯ ಹತ್ತು ಸಮಸ್ತರು', 'ಮೈಲಿಕಲ್ಲಿನೊಡನೆ ಮಾತುಕತೆಗಳು', 'ಗ್ನಾನ' 'ದೇವದೂತರು' ಎಂಬ ಕೃತಿಗಳನ್ನು ಓದಬೇಕು. ಊರಿನ ಕೆರೆಯೊಂದರ ಬಗ್ಗೆ ಅವರು ಪ್ರಬಂಧವೊಂದರಲ್ಲಿ ಬರೆದ ಮೂರು ಸಾಲಿನ ಕವನ ಇಂತಿದೆ:

ಮೊದಲು ನಾನಾದೆ ಋಷಿಗಾಗಿ
ಆಮೇಲೆ ನಾನಾದೆ ಕೃಷಿಗಾಗಿ
ಈಗಿರುವೆ ನೋಡಯ್ಯ ನುಸಿಗಾಗಿ''

ಪತನ ಮುಖೀ ಸಮಾಜವನ್ನು ಕಾರಂತರು ಚಿತ್ರಿಸುವ ಬಗೆ ಈ ರೀತಿಯದು.

ಕಾರಂತರ ವ್ಯಂಗ್ತ-ಕಟಕಿಗಳ ಮೂಲ ನೆಲೆ ಸಾಮಾಜಿಕ ಪ್ರಗತಿಯ ಬಗೆಗಣ ಶ್ರದ್ಧೆಯಲ್ಲಿ ರೂಪಿತವಾಗುವುದರಿಂದಾಗಿ, ಅದು ದ್ವೇಷವಾಗಿ ಮಾರ್ಪಡುವುದಿಲ್ಲ.

**ಕಾದಂಬರಿಕಾರ ಕಾರಂತ**

ಬಹುಶಃ ಮುಂದಿನ ಹಲವು ಶತಮಾನಗಳ ಕಾಲ ಕಾದಂಬರಿಕಾರ ಕಾರಂತರು ನಮ್ಮ ನಡುವಿನ ದೊಡ್ಡ ಶಕ್ತಿಯಾಗಿ ಉಳಿಯಲಿದ್ದಾರೆ. ಅವರು ಬರೆದ 50 ಕ್ಕೂ ಮಿಕ್ಕ ಕಾದಂಬರಿಗಳು ಜಗತ್ತಿನ ಯಾವುದೇ ಭಾಷೆಯಲ್ಲಿ ಬಂದಿರತಕ್ಕಂಥ ಅತ್ಯುತ್ತಮ ಕಾದಂಬರಿಗಳಿಗೆ ಸಮಾನವಾದುವು.

1. ಚೋಮನದುಡಿ (1933)
2. ಬೆಟ್ಟದ ಜೀವ (1943)
3. ಮರಳಿ ಮಣ್ಣಿಗೆ (1942)
4. ಮೈಮನಗಳ ಸುಳಿಯಲ್ಲಿ (1970)
5. ಅರಳಿದ ಮೇಲೆ (1963)

'ಚೋಮನದುಡಿ' 1933ರಲ್ಲಿ ಪ್ರಕಟವಾಗುವಾಗ ಭಾರತ ದೇಶ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿತ್ತು. ಬ್ರಿಟಿಷರನ್ನು ಈ ದೇಶದಿಂದ ಓಡಿಸಿಬಿಟ್ಟರೆ ನಮ್ಮ ಸಮಸ್ಯೆಗಳೆಲ್ಲ ಪರಿಹಾರವಾಗಿ ಬಿಡುತ್ತವೆ ಎಂದು ಭಾವಿಸುತ್ತಿದ್ದ ಕಾಲವದು. ಕಾರಂತರು ಇಂಥ ಆವೇಶದಲ್ಲಿ ಕೊಚ್ಚಿ ಹೋಗದೆ ಈ ದೇಶದ ಸಮಸ್ಯೆ ಭೂಮಿಯ ಒಡೆತನದಲ್ಲಿದೆ, ಭೂಮಿಯ ಸಮಾನ ವಿತರಣೆಯಿಂದ ನಾಡು ಬಿಡುಗಡೆಯಾಗುತ್ತದೆ ಎಂದು ತಣ್ಣಗೆ ಕುಳಿತು ಯೋಚಿಸಿದವರು. ನಾಡಿನೊಳಕ್ಕೆ ವಸಾಹತು ಆಡಳಿತದ ಪ್ರದೇಶ, ಇಂಥ ಪ್ರದೇಶ ತಂದೊಡ್ಡುವ ಧಾರ್ಮಿಕ - ಲೈಂಗಿಕ ಸಮಸ್ಯೆಗಳು, ಜಾತಿಯ ತಾರತಮ್ಯಗಳನ್ನೆಲ್ಲ ಚೋಮನದುಡಿ ಮಾರ್ಮಿಕವಾಗಿ ದಾಖಲಿಸುತ್ತದೆ.

'ಬೆಟ್ಟದ ಜೀವ'ವು ಕಾರಂತರು ಬರೆದ ಕಾವ್ಯದಂಥಾ ಕಾದಂಬರಿ. ಸುಳ್ಯ-ಸುಬ್ರಹ್ಮಣ್ಯ ಪರಿಸರದ ಹಸಿರು ಬೆಟ್ಟಗಳ ನಡುವೆ ಬದುಕುತ್ತಿರುವ ಬ್ರಾಹ್ಮಣ ಕುಟುಂಬದ ಆತಂಕ-ಶ್ರದ್ಧೆ-ಮೌಲ್ಯಗಳನ್ನು ಹಿಡಿದಿಡುವ ಈ ಪುಟ್ಟ ಕಾದಂಬರಿಯನ್ನು ಎಷ್ಟು ಬಾರಿ ಓದಿದರೂ ಸಾಕೆನಿಸುವುದಿಲ್ಲ.

'ಮರಳಿ ಮಣ್ಣಿಗೆ'ಯು ಮೂರು ತಲೆಮಾರಿನ ಕತೆಯನ್ನು ಹೇಳುತ್ತದೆ. ಪರಂಪರೆಗೆ ಕಟ್ಟುಬಿದ್ದ ತಲೆಮಾರು, ಅದರಿಂದ ದೂರ ಸಿಡಿದು ಹಾಳಾದ ಇನ್ನೊಂದು ತಲೆಮಾರು. ಈ ಅನುಭವಗಳ ಆಧಾರದಿಂದ ಮತ್ತೆ ಪರಂಪರೆಗೆ ಹಿಂದಿರುಗುವ ಮೂರನೇ ತಲೆಮಾರು ಹೀಗೆ ಅಜ್ಜ-ಮಗ-ಮೊಮ್ಮಗನ (ರಾಮ ಐತಾಳ-ಲಚ್ಚ ಐತಾಳ-ರಾಮ) ಕತೆ ಹೇಳುವ ಈ ಕಾದಂಬರಿ ಪ್ರತೀತಗೊಳಿಸುವ ಜೀವನ ದರ್ಶನ ಅದ್ಭುತವಾದುದು.

'ಮೈಮನಗಳ ಸುಳಿಯಲ್ಲಿ' ಕಾದಂಬರಿಯು ಮಾನವನ ಅದಮ್ಯ ಕಾಮನೆಗಳನ್ನು ಪರಿಶೀಲಿಸುವ ಅತ್ಯುತ್ತಮ ಕಾದಂಬರಿಯಾಗಿದೆ. ವ್ಯಕ್ತಿ ಸತ್ತ ಮೇಲೆ ಉಳಿಯುವುದೇನು ಎಂಬ ಪ್ರಶ್ನೆಯನ್ನು 'ಅಳಿದ ಮೇಲೆ' ಯಲ್ಲಿ ಅವರು ಕೇಳಿದ್ದಾರೆ.

ಉಳಿದಂತೆ, ಕುಡಿಯರ, ಕೂಸು, ಆಳನಿರಾಳ, ಇನ್ನೊಂದೇ ದಾರಿ, ಒಂಟಿದನಿ, ಔದಾರ್ಯದ ಉರುಳಲ್ಲಿ, ಕರುಳಿನ ಕರೆ, ಗೊಂಡಾರಣ್ಯ, ಚಿಗುರಿದ ಕನಸು, ಜಾರುವ ದಾರಿಯಲ್ಲಿ, ಬತ್ತದ ತೊರೆ, ಮೂಕಜ್ಜಿಯ ಕನಸುಗಳು, ಮುಗಿದ ಯುದ್ಧ, ಸಮೀಕ್ಷೆ, ಸರಸಮ್ಮನ ಸಮಾಧಿ, ಸ್ವಪ್ನದ ಹೊಳೆ, ಧರ್ಮರಾಯನ ಸಂಸಾರ, ಕನ್ನಡಿಯಲ್ಲಿ ಕಂಡಾತ ಅವರ ಅತ್ಯುತ್ತಮ ಕಾದಂಬರಿಗಳಾಗಿವೆ. ಸುಖ-ದುಃಖಗಳ, ಏಳು ಬೀಳುಗಳ ಪರಿಕ್ರಮದಲ್ಲಿ ಬದುಕು ಹದವಾಗುವ ಬಗೆಯನ್ನು ಚಿತ್ರಿಸುವ ಕಾರಂತರು, ಅದಮ್ಯವಾದ ಮಾನವನ ಸಾಮರ್ಥ್ಯವನ್ನು, ಘನತೆಯನ್ನು, ಸಾಧ್ಯತೆಗಳನ್ನು ಸದಾ ಎತ್ತಿ ಹಿಡಿಯುತ್ತಲೇ ಬಂದಿದ್ದಾರೆ. ಅವರ ಕಾದಂಬರಿಗಳಲ್ಲಿ ಕಂಡು ಬರುವ 'ಮುದುಕಿಯರ' ಬಗ್ಗೆ ಇನ್ನಷ್ಟು ಆಳವಾದ ಅಧ್ಯಯನ ನಡೆಯಬೇಕಾಗಿದೆ.

**ರಂಗಭೂಮಿಯಲ್ಲಿ:**

ಕರಾವಳಿ ಕರ್ನಾಟಕದ ಬದುಕಿನ ಭಾಗವಾದ ಯಕ್ಷಗಾನವನ್ನು ಕಾರಂತರು ಸ್ವತಃ ಅಭ್ಯಸಿಸಿ, ಅದರ ಮೇಲೆ ಹಿಡಿತ ಸಾಧಿಸಿ, ಅದರ ಬಗ್ಗೆ ಇಂಗ್ಲಿಷಿನಲ್ಲಿ ಪುಸ್ತಕ ಬರೆದು, ಆ ಕಲೆಗೊಂದು ವಿಶ್ವಮಾನ್ಯತೆಯನ್ನು ತಂದುಕೊಟ್ಟರು. ಪಾಶ್ಚಾತ್ಯ ಪ್ರೇಕ್ಷಕರಿಗೆ ಬೇಕಾಗುವ ರೀತಿಯಲ್ಲಿ ಯಕ್ಷಗಾನವನ್ನು ತಿದ್ದಿ ಅವರು 'ಯಕ್ಷರಂಗ' ಕಟ್ಟಿದರು. ಜಗತ್ತಿನ ಎಲ್ಲೆಡೆಯೂ ಯಕ್ಷರಂಗದ ಪ್ರದರ್ಶನಗಳು ಪ್ರಖ್ಯಾತಿಯಾದವು. ಕರ್ನಾಟಕದ ಪುಟ್ಟ ಕಲೆಯೊಂದನ್ನು ಕಾರಂತರು ಜಗತ್ತಿಗೆ ಪರಿಚಯಿಸಿದ ರೀತಿ 20ನೇ ಶತಮಾನದ ಮಹಾಸಾಧನೆಗಳಲ್ಲಿ ಒಂದು.

ರಂಗಭೂಮಿಯ ಇತರ ಪ್ರಕಾರಗಳ ಬಗೆಗೂ ಅವರು ಗಮನಕೊಟ್ಟಿದ್ದರು. ಅವರು ಬರೆದ ವಿಜಯದಶಮಿ, ಬೆವರಿಗೆ ಜಯವಾಗಲಿ, ಹಣೆ ಬರೆಹ, ಬೌದ್ಧಯಾತ್ರಾ, ದೈವ್ವದ ಜಾಲ, ಗರ್ಭಗುಡಿ, ಮುಕ್ತದ್ವಾರ, ಮತ್ತಿತರ ನಾಟಕಗಳು ಅನೇಕ ಶಾಲಾ-ಕಾಲೇಜುಗಳಲ್ಲಿ ಪ್ರದರ್ಶನಗೊಂಡುವು. ನಾಟಕಗಳನ್ನು ಬರೆದು, ನಿರ್ದೇಶಿಸಿ, ಅಭಿನಯಿಸಿ, ನಾಡಿನ ಸಾಂಸ್ಕತಿಕ ಸಿರಿಯನ್ನು ಹೆಚ್ಚಿಸುವ ಅವರ ಸಾಹಸ ಮಾತ್ರ ಅನನ್ಯವಾದುದು.

## ಅದ್ವಿತೀಯ ಸಾಧನೆ

ನಾನು ಈಗಾಗಲೇ ಹೇಳಿದಂತೆ ಕಾರಂತರು ಬರೆದ ಎಲ್ಲ ಪುಸ್ತಕಗಳ ಪಟ್ಟಿಯನ್ನು ಇಲ್ಲಿ ನೀಡಲು ಸಾಧ್ಯವಿಲ್ಲ. ತೆರೆಯ ಮರೆಯಲ್ಲಿ, ಹಸಿವು, ಹಾವು ಮತ್ತು ಕವಿಕರ್ಮ ಎಂಬ ಹೆಸರಿನ ಸಣ್ಣ ಕಥಾ ಸಂಕಲನಗಳನ್ನು ಅವರು ಪ್ರಕಟಿಸಿದ್ದಾರೆ. ಬಾಲ ಪ್ರಪಂಚ, ವಿಜ್ಞಾನ ಪ್ರಪಂಚ, ಅಪೂರ್ವ ಪಶ್ಚಿಮ, ಅಬೂವಿಂದ ಬರಾಮಕ್ಕೆ, ಚಿತ್ರಮಯ ದಕ್ಷಿಣ ಕನ್ನಡ, ಅರಸಿಕರಲ್ಲ, ಪಾತಾಳಕ್ಕೆ ಪಯಣ, ಕೆ.ಕೆ.ಹೆಬ್ಬಾರ, ಓದುವ ಆಟ, ಭಾರತೀಯ ಶಿಲ್ಪ ಮೊದಲಾದ ಪುಸ್ತಕಗಳನ್ನಲ್ಲದೆ ಅವರು ಸಾವಿರಕ್ಕೂ ಮಿಕ್ಕು ಲೇಖನಗಳನ್ನು ಪ್ರಕಟಿಸಿದ್ದಾರೆ.

ಹೀಗೆ ಡಾ.ಶಿವರಾಮ ಕಾರಂತರ ಸಾಧನೆ ಅದ್ವಿತೀಯವಾದುದು. 20ನೇ ಶತಮಾನದ ಇತರ ಸಾಹಿತಿಗಳೊಂದಿಗೆ ಅವರನ್ನು ಹೋಲಿಸಿ ನೋಡಿದರೆ ಸಣ್ಣ ಪುಟ್ಟ ಗುಡ್ಡಗಳಿಂದ ಸುತ್ತುವರಿದಿರುವ ಮಹಾಪರ್ವತದಂತೆ ಕಾಣುತ್ತಾರೆ ಅವರು. ಅವರಿಗೊಬ್ಬ ಸೂಕ್ತ ಅನುವಾದಕ ದೊರೆತಿದ್ದರೆ ನೋಬೆಲ್ ಪ್ರಶಸ್ತಿ ಅವರಿಗೆ ಎಂದೋ ಬಂದು ಬಿಡುತ್ತಿತ್ತು.

(ಡಾ.ಪುರುಷೋತ್ತಮ ಬಿಳಿಮಲೆ ಅವರು ದೆಹಲಿಯಲ್ಲಿ 'ದೆಹಲಿ ಕರ್ನಾಟಕ ಸಂಘ'ದ ಅಧ್ಯಕ್ಷರಾಗಿದ್ದು ಕನ್ನಡದ ಕೆಲಸವನ್ನು ಅತ್ಯಂತ ನಿಷ್ಠೆಯಿಂದ ನಡೆಸಿಕೊಂಡು ಬರುತಿದ್ದಾರೆ. ಶ್ರೇಷ್ಠ ಜಾನಪದ ವಿದ್ವಾಂಸರಾದ ಅವರ ಕನ್ನಡ ಸೇವೆ ಅನುಕರಣೀಯವಾದುದು.)



# ನಾಡಿನ ಅಂತಃಸಾಕ್ಷಿ : ಕಾರಂತರು

-ಬಿ.ವಿ.ಕೆದಿಲಾಯ

ಕನ್ನಡ ಸಾಹಿತ್ಯ ಲೋಕದಲ್ಲಿ ಶಿವರಾಮ ಕಾರಂತರು ಒಂಟಿ ಸಲಗದಂತೆ ಅನನ್ಯರು ಹೇಗೋ ಹಾಗೇ ಏಕಾಕಿ ಕೂಡ. ಅವರು ಯಾರಿಗೂ 'ಗುರು'ವಾಗಲಿಲ್ಲ. ಯಾರಿಗೂ ಶಿಷ್ಯರಾಗಲಿಲ್ಲ. ಅವರ ವ್ಯಕ್ತಿತ್ವದಿಂದ, ಸಾಹಿತ್ಯದಿಂದ ಪ್ರಭಾವಿತರಾದ ಅನೇಕ ಮಂದಿ ಸಾಹಿತಿಗಳಿದ್ದಾರೆ. ಆದರೆ ಕಾರಂತರು ಕಟ್ಟಿದ ಮಠವಾಗಲೀ, ಸೃಷ್ಟಿಸಿದ ಶಿಷ್ಯವೃಂದವಾಗಲೀ, ನಿರ್ಮಿಸಿದ ಸಂಪ್ರದಾಯವಾಗಲೀ ಇಲ್ಲ. ಅಂಥವುಗಳನ್ನು ಅವರು ಹುಟ್ಟು ಹಾಕಿದವರೂ ಅಲ್ಲ, ಪ್ರೋತ್ಸಾಹಿಸಿದವರೂ ಅಲ್ಲ. ಅವರೊಬ್ಬ ಪ್ರಚಂಡ ವ್ಯಕ್ತಿವಾದಿ. ಅವರ ಸಾಧನೆ, ಸಿದ್ಧಿಗಳು ತೀರ ವೈಯಕ್ತಿಕವಾದವು. ಅವರ ಸುತ್ತ ಜನರಿರಬಹುದು. ಆದರೆ ಅದೇ ಅವರ 'ಗುಂಪು' ಅಥವಾ 'ಬಣ'ವಾಗಿರುವುದಿಲ್ಲ. ಯಾವ ಗುರುವಿಗೂ ಶರಣಾಗದ ಅವರು ಸ್ವಯಂ ಗುರುವಾಗುವ ಅವಕಾಶವಿದ್ದರೂ ಅದಕ್ಕೆ ಯತ್ನಿಸದ ನೈಜ ಧೀಮಂತ. ಬೌದ್ಧಿಕ ಸಾಧನೆ, ನೈತಿಕ ಧೈರ್ಯ ಹಾಗೂ ಸಾಮಾಜಿಕ ಕಳಕಳಿಗಳಿಂದಲೇ ಓರ್ವ ವ್ಯಕ್ತಿಯಾಗಿದ್ದೂ ಒಂದು ಸಮೂಹದ ಶಕ್ತಿಯನ್ನು ಗಳಿಸಿರುವ ಅನನ್ಯ ಚೇತನ.

## ಅನನ್ಯತೆ

ಸಾಹಿತ್ಯ ಸೃಷ್ಟಿಯಲ್ಲಿಯೂ ಕಾರಂತರ ಅನನ್ಯತೆ ಎದ್ದು ಕಾಣುತ್ತದೆ. ಅವರು ನವೋದಯದ ಸಂಪ್ರದಾಯಕ್ಕೆ ಸೇರಿದ ಲೇಖಕರು ಎಂಬುದು ಒಂದು ದೃಷ್ಟಿಯಿಂದ ನಿಜವಾದರೂ, ಆ ಸಂಪ್ರದಾಯದ ಚೌಕಟ್ಟನ್ನು ಬಹಳಷ್ಟು ಮೀರಿದವರೆಂಬುದನ್ನು ಮರೆಯಲು ಸಾಧ್ಯವಿಲ್ಲ. ಅವರ ಅನೇಕ ಕೃತಿಗಳಲ್ಲಿ ನವೋದಯದ ಧೋರಣೆಗಳಿಗೆ ಭಿನ್ನವಾದ, ನವ್ಯದ, ದಲಿತ-ಬಂಡಾಯದ ಅಂಶಗಳನ್ನು ಕಾಣಬಹುದು. ಮನಸ್ಸು ಮಾಡಿದ್ದರೆ ಅವರು ನವ್ಯದ ನಾಯಕರಾಗಬಹುದಿತ್ತೋ ಏನೋ ಎಂದು ವಿಮರ್ಶಕರೊಬ್ಬರು ಹೇಳಿದ್ದುಂಟು. ಸಾಹಿತ್ಯವೊಂದನ್ನೇ ಬದುಕಿನ ಸಾಫಲ್ಯದ ಮಾರ್ಗವೆಂದು ಸ್ವೀಕರಿಸಿದ್ದರೆ ಅದು ಶಕ್ಯವಾಗುತ್ತಿತ್ತೋ ಏನೋ. ಆದರೆ ಬಹುಮುಖ ಪ್ರತಿಭೆಯ ಕಾರಂತರಿಗೆ ಸಾಹಿತ್ಯಕ್ಕಿಂತ ಬದುಕು ಮುಖ್ಯ. ಅದೇನೇ ಇರಲಿ, ಅವರು ಸಾಹಿತ್ಯದಲ್ಲಿ ಅವರ ಸಮಕಾಲೀನರ ಧೋರಣೆಗಳಿಗಿಂತ ಭಿನ್ನವಾಗಿ, ಏಕಾಕಿಯಾಗಿ ಮುನ್ನಡೆಯುವ ರೀತಿ ಕುತೂಹಲಕಾರಿಯಾದುದು. ಈ ಅನನ್ಯತೆಯ ಒಂದೆರಡು ಅಂಶಗಳನ್ನು ಕೊಂಚ ಪರಿಶೀಲಿಸೋಣ.

ನವೋದಯದ ಪ್ರಮುಖ ಲೇಖಕರೆಲ್ಲರೂ ಆಸ್ತಿಕರು. ಉದಾಹರಣೆಗೆ ಬೇಂದ್ರೆ, ಮಾಸ್ತಿ, ಪು.ತಿ.ನ., ಕುವೆಂಪು ಮುಂತಾದವರು. ಅವರ ಆಸ್ತಿಕತೆಯಲ್ಲಿ ಹಾಗೂ ಆಧ್ಯಾತ್ಮಿಕತೆಯಲ್ಲಿ ಅಷ್ಟಿಷ್ಟು ವ್ಯತ್ಯಾಸಗಳಿರಬಹುದು. ಆದರೆ ಒಂದಲ್ಲ ಒಂದು ತೆರನ ಆಧ್ಯಾತ್ಮಿಕ ಶ್ರದ್ಧೆ ಅವರ ಪ್ರಜ್ಞೆಯ ಮಹತ್ವದ ಅಂಶವಾಗಿದ್ದು, ಅದು ಅವರ ಸಾಹಿತ್ಯ ಸೃಷ್ಟಿಯಲ್ಲಿ ಅಂತರ್ಗತವಾಗಿರುವುದನ್ನು ಕಾಣುತ್ತೇವೆ. ಹಾಗೆ ನೋಡಿದರೆ ಆಧ್ಯಾತ್ಮಿಕತೆ ರಮ್ಯ ಸಂಪ್ರದಾಯದ ಒಂದು ಅವಿಭಾಜ್ಯ ಅಂಗವೇ ಆಗಿದೆ ಎಂದರೂ ತಪ್ಪಲ್ಲ. ಕಾರಂತರು ಇದೇ ತಲೆಮಾರಿಗೆ ಸೇರಿದವರಾದರೂ ಈ ವಿಷಯದಲ್ಲಿ ಸುಸ್ಪಷ್ಟವಾದ ವಿಭಿನ್ನ ಧೋರಣೆ ತಳೆದರು. ಅವರ ನಾಸ್ತಿಕತೆ ಅಥವಾ ಅಜ್ಞೇಯವಾದ ಅಂದರೆ, ದೇವರು ಇದ್ದಾನೋ ಇಲ್ಲವೊ ಎನ್ನುವುದನ್ನು ನಿಸ್ಸಂದಿಗ್ಧವಾಗಿ, ಕರಾರುವಾಕ್ಕಾಗಿ ನಿರ್ಧರಿಸಲು ಸಾಧ್ಯವಾಗದಂಥ ವಾಸ್ತವಿಕ ಸ್ಥಿತಿಯ ಸ್ವೀಕಾರ ಅವರ ಮುಂದಿನ ತಲೆಮಾರಿನ ನವ್ಯದ ಆಧ್ಯಾತ್ಮಿಕ ಧೋರಣೆಗೆ ತೀರ ಹತ್ತಿರವಾಗಿದೆ. ಇಂದು ನಮ್ಮ ಸುತ್ತ ಮುತ್ತಲೂ ಕೋಟ್ಯಂತರ ಆಸ್ತಿಕರೆನಿಸಿಕೊಂಡವರನ್ನು ಕಾಣುತ್ತೇವೆ. ಆದರೆ ಅವರಲ್ಲಿ ಪ್ರಾಮಾಣಿಕವಾಗಿ, ಪ್ರಜ್ಞೆಯ ಆಳದಲ್ಲಿ ಭಕ್ತರೋ, ಆಸ್ತಿಕರೋ ಆಗಿರುವವರು ಎಷ್ಟು ಮಂದಿ ಎನ್ನುವುದನ್ನು ಶೋಧಿಸಿದರೆ ಬಹುಶಃ ನೂರಕ್ಕೆ ತೊಂಬತ್ತುರಷ್ಟು ಮಂದಿ ಅತ್ತ ಆಸ್ತಿಕರೂ ಅಲ್ಲದ, ನಾಸ್ತಿಕರೂ ಆಗಲಾರದ ಆಧ್ಯಾತ್ಮಿಕ ಎಡಬಿಡಂಗಿಗಳಾಗಿರುವುದು ಗೋಚರಿಸೀತು.

ಪರೀಕ್ಷೆ ಸಮೀಪಿಸಿದಾಗ ದೇವಸ್ಥಾನಕ್ಕೆ ಹೋಗುವ, ಗಣೇಶೋತ್ಸವಗಳಲ್ಲಿ ಸಿನೆಮಾ ಭಜನೆಗಳನ್ನು ಹಾಡುತ್ತ ಕುಣಿಯುವ 'ಆಸ್ತಿಕ'ರೂ ಈ ಗುಂಪಿನಲ್ಲಿರುತ್ತಾರೆ. ಇಂಥ ಆಸ್ತಿಕತೆ ಸಾಮಾಜಿಕವಾಗಿ ಸ್ವೀಕೃತವಾಗಿರುವ ಆಚರಣೆಯಲ್ಲಿ ಒಂದಾಗುವ ಯಾಂತ್ರಿಕ ಹಾಗೂ ವ್ಯಾವಹಾರಿಕ ನಡವಳಿಕೆಯೇ ಹೊರತು ವ್ಯಕ್ತಿಯೊಬ್ಬನ ಪ್ರಜ್ಞೆಯ ಆಳದಲ್ಲಿ ಜ್ವಲಿಸುವ ನೈಜ ಆಧ್ಯಾತ್ಮಿಕತೆ ಖಂಡಿತ ಅಲ್ಲ.

ಕಾರಂತರು ತಮ್ಮ ಕಾಲದ ನಂಬಿಕೆಗಳಿಂದಲೂ ಮುಂದೆ ಹೋಗಿ ಆಸ್ತಿಕತೆಯನ್ನು ತನ್ನ ವೈಯಕ್ತಿಕ ಅನುಭವದ ನಿಕಷದಲ್ಲಿ ಶೋಧಿಸಿದರು. ಅಧ್ಯಯನದ, ಚಿಂತನೆಯ, ಅನುಭವದ ಪ್ರಾಮಾಣಿಕತೆಗೆ ತಕ್ಕ ಧೋರಣೆ ತಳೆದರು. ಒಂದು ಕಾಲದಲ್ಲಿ ಭಗವದ್ಗೀತೆಯನ್ನು ಅನುವಾದಿಸಿದ, ಪರಮಹಂಸರನ್ನೂ, ಗಾಂಧೀಜಿಯವರನ್ನೂ ಮೆಚ್ಚಿದ ಕಾರಂತರು ಆಧ್ಯಾತ್ಮಿಕತೆಯನ್ನು ಹಗುರವಾಗಿ ಕಂಡು, ಉಡಾಫೆಯಿಂದ ತಿರಸ್ಕರಿಸಿದವರಲ್ಲ ಎನ್ನುವುದು ಗಮನಾರ್ಹವಾದ ಸಂಗತಿ.

ಅವರ ಮಾನವೀಯ ಕಳಕಳಿ ಅನೇಕ ಆಸ್ತಿಕರೆನಿಸಿಕೊಂಡವರ ನಡವಳಿಕೆಗಳಲ್ಲಿ ಅಡಗಿದ್ದ ಅನೈತಿಕತೆಯನ್ನೂ, ಕ್ರೌರ್ಯವನ್ನೂ ಬಯಲಿಗೆಳೆಯಿತು. ಅವರ ಅನನ್ಯ ಬೌದ್ಧಿಕ ಪ್ರಾಮಾಣಿಕತೆಯೇ ಅವರ ನಾಸ್ತಿಕತೆ ಅಥವಾ ಆಧ್ಯಾತ್ಮಿಕ ಅಜ್ಞೇಯವಾದದ ಮೂಲದಲ್ಲಿರುವಂಥದು. ಈ ದೃಷ್ಟಿಯಿಂದ ಕಾರಂತರು ತಮ್ಮ ತಲೆಮಾರಿನವರಿಗಿಂತ ಭಿನ್ನರೂ, ಆಧುನಿಕರೂ ಆಗಿದ್ದಾರೆ.

## ಪ್ರಬುದ್ಧತೆಯ ಶಿಖರ

ನವೋದಯದ ಯುಗ ಭಾವುಕತೆಯ ಯುಗ, ಭಾವೋದ್ವೇಗದ ಯುಗ. ಆ ಯುಗದ ಧರ್ಮವೇ ಹಾಗಿತ್ತು. ಯೌವನದ ಆರಂಭದ ದೆಸೆಯಲ್ಲಿ ಭಾವತೀವ್ರತೆ ಅತ್ಯಂತ ಸಹಜವಾಗಿರುವಂತೆ ಅದೂ ಸಹಜವಾಗಿತ್ತು. ಆದರೆ ಭಾವುಕತೆ ಮಿತಿ ಮೀರಿದರೆ ಸಾಹಿತ್ಯವು ಜ್ವರದಿಂದ ಕಂಪಿಸುವ ವ್ಯಕ್ತಿಯಂತೆ ಅಸ್ವಸ್ಥ ಸ್ಥಿತಿಗೆ ಜಾರುವ ಅಪಾಯವಿರುತ್ತದೆ. ಆಗ ಅನುಭವದ ಸೂಕ್ಷ್ಮತೆ, ಸಂಕೀರ್ಣತೆಗಳು ಮಾಯವಾಗಿ, ಸರಳೀಕೃತ, ಅವಾಸ್ತವಿಕ ಮಾದರಿಗಳು ವಿಜೃಂಭಿಸುವಂತಾಗುತ್ತವೆ. ನವೋದಯದ ಕಾಲದಲ್ಲಿ ಇಂಥ ಸಾಹಿತ್ಯ ಸಮೃದ್ಧವಾಗಿತ್ತು. (ಈಗಲೂ ಬಹುತೇಕ ಜನಪ್ರಿಯ ಸಾಹಿತ್ಯ, ಸಿನೆಮಾಗಳ ಸರಕು ಇದೇ.) ಭಾವುಕ ಬರವಣಿಗೆಯನ್ನು ಸಿದ್ಧ ಶೈಲಿಯಲ್ಲಿ ಅನುಕರಿಸಿದ ಅಸಂಖ್ಯ ಕೃತಿಗಳು ಸೃಷ್ಟಿಯಾದವು. ಒಳ್ಳೆಯವರು, ಕೆಟ್ಟವರು ಎಂಬ ಕಪ್ಪು - ಬಿಳುಪು ಪಾತ್ರಗಳು ಅವುಗಳಲ್ಲಿ ವಿಜೃಂಭಿಸಿದವು. ಈ ಸೆಳೆತಕ್ಕೆ ಸಿಕ್ಕದೆ, ಭಾವೋದ್ವೇಗವನ್ನು ಸಮರ್ಥವಾಗಿ ನಿಯಂತ್ರಿಸಿ, ಬರವಣಿಗೆಯಲ್ಲಿ ಅಪಾರ ಸಂಯಮವನ್ನು ಸಾಧಿಸಿದ ಲೇಖಕರಲ್ಲಿ ಕಾರಂತರು ಅಗ್ರಗಣ್ಯರು. ಅವರದು ಮಾಸ್ತಿಯವರಂಥ ಶಾಂತ ಸ್ವಭಾವವಲ್ಲ. ಅನ್ಯಾಯ, ಅಪ್ರಾಮಾಣಿಕತೆ, ಅಪಾಢ ಭೂತಿತನಗಳನ್ನು ಕಂಡರೆ ಸಿಟ್ಟಿನಿಂದ ಸಿಡಿದೇಳುವುದು ಅವರ ಸ್ವಭಾವ. ಹೀಗಿದ್ದರೂ ಅವರ ಹೆಚ್ಚಿನ ಸೃಜನಶೀಲ ಬರಹಗಳಲ್ಲಿ ಅವರು ಸಾಧಿಸಿರುವ ಸಂಯಮ, ಸಮತೋಲ ಆಶ್ಚರ್ಯಕರವಾದುದು. ಭಾಷಣದಲ್ಲಿ, ಸಂಭಾಷಣೆಗಳಲ್ಲಿ ತುಂಬ ಖಾರವಾಗಿ ಉದ್ವೇಗದಿಂದ ಮಾತನಾಡುವ ಕಾರಂತರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತಳೆಯುವ ತಟಸ್ಥ ಸ್ಥಿತಿ ಸಂಯಮ ಅನ್ಯಾದೃಶವಾದದ್ದು. ಅವರ ಪ್ರೌಢ ವಯಸ್ಸಿನ ಕೃತಿಗಳಾದ 'ಸಮೀಕ್ಷೆ', 'ಅಳಿದ ಮೇಲೆ', 'ನಂಜಿದವರ ನಾಕ ನರಕ', 'ಜಾರುವ ದಾರಿಯಲ್ಲಿ' ಮುಂತಾದ ಕೃತಿಗಳಲ್ಲಿ ಈ ಗುಣವನ್ನು ವಿಶೇಷವಾಗಿ ಕಾಣಬಹುದು. ಇಲ್ಲಿ ಕಾರಂತರ ಕಲೆಗಾರಿಕೆ ಪ್ರಬುದ್ಧತೆಯ ಶಿಖರವನ್ನು ಮುಟ್ಟಿದೆ.

## ಸಂಕೀರ್ಣ ಬದುಕಿನ ಚಿತ್ರಣ

ಕಾರಂತರು ಬರವಣಿಗೆಯಲ್ಲಿ ಸರಳತೆಯ ದೀಕ್ಷೆ ತೊಟ್ಟವರಾದರೂ ಬದುಕಿನ ಸಂಕೀರ್ಣತೆಗೆ ಕುರುಡಾದವರಲ್ಲ. ಅವರ ಉತ್ತಮ ಕೃತಿಗಳ ಪಾತ್ರಗಳ ಸೃಷ್ಟಿಯಲ್ಲಿ ಇದನ್ನು ಸಾಕಷ್ಟು ನಿಚ್ಚಳವಾಗಿ ಕಾಣಬಹುದು. ಉದಾಹರಣೆಗೆ 'ಸಮೀಕ್ಷೆ'ಯ ನಾಯಕನ ವ್ಯಕ್ತಿತ್ವ, ಚಿಂತನೆ, ಧೋರಣೆಗಳನ್ನು ಪರಿಶೀಲಿಸಬಹುದು. ಆತನ ಬದುಕಿನಲ್ಲಿ ನಡೆಯುತ್ತಿರುವ ಘಟನೆಗಳನ್ನು ಎದುರಿಸುವ ರೀತಿ, ಅಂತರಂಗವನ್ನು ಶೋಧಿಸುವ ತೀಕ್ಷ್ಣತೆ, ಭಾವನೆಗಳನ್ನೂ ಪ್ರತಿಕ್ರಿಯೆಗಳನ್ನೂ ನಿಯಂತ್ರಿಸಿಕೊಳ್ಳುವಲ್ಲಿ ಕಾಣಿಸುವ ನಿರ್ಲಿಪ್ತತೆ, ಜೀವನ ಮೌಲ್ಯ ಕುರಿತ ಚಿಂತನೆಯಲ್ಲಿ ತೋರುವ ಸೂಕ್ಷ್ಮತೆ ಇವೆಲ್ಲ ನವ್ಯ ಕಾದಂಬರಿಗಳನ್ನು ನೆನಪಿಸುತ್ತವೆ. ಅನುಭವ ಸಮೃದ್ಧಿಯಲ್ಲಿ ಕಾರಂತರಿಗೆ ಸರಿಸಾಟಿಯಿಲ್ಲ. ಅಂತಲೇ ಅವರು ಸೃಷ್ಟಿಸಿದ ಪಾತ್ರಗಳಲ್ಲಿ ಅಪಾರ ವೈವಿದ್ಯವನ್ನು ಕಾಣುತ್ತೇವೆ. ಚೋಮ, ಸೂರ, ಕೆಂಚ, ಕರಿಯರಂಥ ದಲಿತರಿಂದ ಹಿಡಿದು ರಾಮೈತಾಳನಂಥ ವೈದಿಕರವರೆಗೆ ನಮ್ಮ ಸಮಾಜದ ಎಲ್ಲ ಸ್ತರಗಳ ಬದುಕನ್ನು ಅವರಷ್ಟು ಅಥೆಂಟಿಕ್ ಆಗಿ ಚಿತ್ರಿಸಿದವರು ಬೇರೆ ಇಲ್ಲ. ವ್ಯಾಸ, ಶೇಕ್ಸ್‌ಪಿಯರರನ್ನು ನೆನಪಿಸುವ ಈ ಪಾತ್ರ ವೈವಿಧ್ಯದಲ್ಲಿ ಎಲ್ಲಿಯೂ ಒಂದಿಷ್ಟು ಕೃತ್ರಿಮತೆಯಿಲ್ಲದಿರುವುದು ಕಾರಂತರ ಅನುಭವ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಈ ವೈವಿಧ್ಯಮಯ ವ್ಯಕ್ತಿಗಳಲ್ಲಿ ದೊಡ್ಡವರು, ಸಣ್ಣವರು ಇರಬಹುದಲ್ಲದೆ ಪುರಾಣ ಪುರುಷರಂಥ ಪರಿಪೂರ್ಣರೂ ಯಾರು ಇಲ್ಲ. ಎಲ್ಲರೂ ಶಕ್ತಿ, ದೌರ್ಬಲ್ಯಗಳ ಸಂಕೀರ್ಣವಾಗಿರುವ ಕೇವಲ ಮನುಷ್ಯರೇ. ಈ ಮಾತು ಇಂದಿನ ಕಾಲಕ್ಕೆ ಹೊಸತಲ್ಲ. ಆದರೆ ಕಾರಂತರು ಅದನ್ನು ಆರೇಳು ದಶಕಗಳ ಹಿಂದೆಯೇ ಕಂಡಿದ್ದರೆನ್ನುವುದು ಅವರ ಹೆಚ್ಚುಗಾರಿಕೆ.

## ಉತ್ತುಂಗ ಪ್ರತಿಭೆ

ದಲಿತ, ಬಂಡಾಯ, ಪಂಥ ಆರಂಭವಾದ ನಂತರ ಕನ್ನಡ ಸಾಹಿತ್ಯ ಲೋಕದಲ್ಲಿ ಸಾಕಷ್ಟು ಗದ್ದಲ ನಡೆದಿದೆ. ಅನೇಕ ಗಮನಾರ್ಹ ಕೃತಿಗಳೂ ಬಂದಿವೆ. ಆದರೆ ಕಾರಂತರ 'ಚೋಮನ ದುಡಿ'ಗೆ ಸರಿಸಾಟಿಯಾಗಿ ನಿಲ್ಲಬಲ್ಲ ದಲಿತಪರ ಕೃತಿ ಇನ್ನೂ ಬಂದಿಲ್ಲ ಎನ್ನುವುದು ಅರ್ಥಪೂರ್ಣ. ವರ್ಷಗಳ ಹಿಂದೆ, ದಲಿತ ಪ್ರಜ್ಞೆಯೇ ಸಮಾಜದಲ್ಲಿನ್ನೂ ಮೂಡದಿದ್ದ ಕಾಲದಲ್ಲಿ ಅವರು ಅದನ್ನು ಬರೆದರೆನ್ನುವುದನ್ನು ಗಮನಿಸಿದರೆ ಅದು ಎಂಥ ಮಹಾನ್ ಸಾಧನೆ ಎಂಬುದು ಸ್ಪಷ್ಟವಾಗುತ್ತದೆ. ದಲಿತರ ಬದುಕಿನ ಸಮಸ್ಯೆಯಲ್ಲಿ ಹಾಸುಹೊಕ್ಕಾಗಿರುವ ಜಾತೀಯತೆ, ಅಸ್ಪೃಶ್ಯತೆಗಳಲ್ಲದೆ, ಆಸ್ತಿಯ ಹಕ್ಕು, ಮತಾಂತರ ಮುಂತಾದ ಎಲ್ಲಾ ಆಯಾಮಗಳನ್ನು ಈ ಕೃತಿ ಒಳಗೊಂಡಿರುವುದು ಕಾರಂತರ ಉತ್ತುಂಗ ಪ್ರತಿಭೆಗೆ ಸಾಕ್ಷಿಯಾಗಿದೆ.



# ಕುರ್ಚಿಗಾಗಿ ಕುಸ್ತಿ

-ಕೋಟೇಶ್ವರ ಸೂರ್ಯನಾರಾಯಣ ರಾವ್

ಭಾರತ ಭೂಮಿಯಲ್ಲಿ ಸನಾತನ ಧರ್ಮ ಸಂಸ್ಕೃತಿ ಹಾಗೂ ನಾಗರಿಕ ಪರಿಸ್ಥಿತಿ ವಿಶ್ವದಲ್ಲಿಯೇ ಅತ್ಯಂತ ಪುರಾತನ ಸಂಸ್ಕೃತಿಯಾಗಿ ಬೆಳಗುತ್ತಿದೆ. ಭಾರತದ ಪ್ರಾಚೀನ ಸಂಸ್ಕೃತಿಯ ನಂತರದ ಸರದಿ ಯುರೋಪಿಯನ್ ಸಂಸ್ಕೃತಿಯಾಗಿ ಕಂಡುಬರುತ್ತದೆ.

ಇತಿಹಾಸ ಚರಿತ್ರೆ, ಪ್ರಾಚೀನ ಸಂಸ್ಕೃತಿಯ ಕುರಿತಂತೆ ವಿಶೇಷ ಆಸಕ್ತಿ ಹೊಂದಿರುವ ನನಗೆ ಐರೋಪ್ಯ ರಾಷ್ಟ್ರಗಳ ದರ್ಶನ ಮಾಡುವ ಸುಯೋಗ ಪ್ರಾಪ್ತವಾಗಿತ್ತು. ನನ್ನ ಪ್ರವಾಸಕಾಲದಲ್ಲಿ ಸ್ವಿಜರ್‌ಲ್ಯಾಂಡಿನ ಸುಂದರ ಪ್ರಾಕೃತಿಕ ಸೌಂದರ್ಯದ ದರ್ಶನ ಹಾಗೂ ಅಲ್ಲಿನ ಜನಜೀವನದ ಪರಿಚಯವನ್ನು ಪಡೆಯುತ್ತಾ ಜಿನೇವಾದಲ್ಲಿ ವಿಶ್ವರಾಷ್ಟ್ರ ಸಂಸ್ಥೆಯ ಸುಂದರಭವನ ಹಾಗೂ ಅದರ ಎದುರು ಭಾಗದ ಸುಂದರ ತೋಟ ನೋಡುತ್ತಿರುವಾಗ ಒಂದು ವಿಲಕ್ಷಣ ಮರದ ಕೃತಿಯೊಂದು ಮನ ಸೆಳೆಯಿತು.

ಅಲ್ಲೊಂದು ಕುರ್ಚಿ ಸಾಧಾರಣ 25 ಅಡಿ ಎತ್ತರದ ಮರದಿಂದ ತಯಾರಿಸಿದ ಸಾಮಾನ್ಯ ಮಾದರಿಯಾಗಿತ್ತು. ಆದರೆ ಆ ಕುರ್ಚಿಗೆ ಕೇವಲ ಮೂರು ಕಾಲುಗಳಿದ್ದು, ಒಂದು ಕಾಲು ತುಂಡರಿಸಿ ಇಡಲ್ಪಟ್ಟಿತ್ತು. ಅದರ ಬಗೆಗಿನ ವಿವರಣೆ ಕೇಳುತ್ತಿದ್ದಂತೆ - ಸಂಪೂರ್ಣ ವಿಶ್ವದ ರಾಷ್ಟ್ರಗಳಲ್ಲಿ ಕುರ್ಚಿಗಾಗಿ ನಡೆಯುವ ಹೋರಾಟ, ಅದಕ್ಕಾಗಿ ಯುದ್ಧ, ಕೊಲೆಗಳು ಇತ್ಯಾದಿಯ ಪ್ರತಿಬಿಂಬವಾಗಿ ಮೂರುವರೆ ಕಾಲಿನ ಬೃಹತ್ ಮರದ ಕುರ್ಚಿ ಚಟುವಟಿಕೆ ನಿರ್ವಹಿಸಲು ವಿಶ್ವಸಂಸ್ಥೆಯ ಕಟ್ಟಡದ ಎದುರು ಅರ್ಥಪೂರ್ಣವಾಗಿ ಇಡಲ್ಪಟ್ಟಿತ್ತು.

ಕುರ್ಚಿಗಾಗಿ ಸಂಘರ್ಷ ಇಂದು-ನಿನ್ನೆಯ ಕಥೆಯಲ್ಲ. ಈ ಹಿಂದೆ ಯುರೋಪು ಖಂಡದ ಪ್ರಬಲ ಸಾಮ್ರಾಜ್ಯಗಳು ಹೊಡೆದಾಡಿದ, ರಾಜ-ರಾಜರ ನಡುವಿನ ಹೋರಾಟ, ರಾಜವಂಶಿಯರ ನಡುವೆ ನಡೆದ ಕಲಹಗಳು, ಸಿಂಹಾಸನಕ್ಕಾಗಿ ನಡೆದ ಕಲಹಗಳ ಪ್ರತಿಬಿಂಬವಾಗಿ ಜಿನೇವಾದ ಸಂಯುಕ್ತ ರಾಷ್ಟ್ರ ಸಂಘದ ಬೃಹತ್ ಕಟ್ಟಡದ ಎದುರು ಭಾಗದ ಬಯಲಲ್ಲಿ ಇಡಲ್ಪಟ್ಟಿತ್ತು. ಇಂತಹ ಸಂಘರ್ಷಗಳನ್ನು ಬಗೆಹರಿಸಲೆಂದೇ ವಿಶ್ವಸಂಸ್ಥೆಯ ಉದಯವಾಗಿರುವುದರ ಮಾರ್ಮಿಕ ನಿರೂಪಣೆಯೇ ಈ ಕುರ್ಚಿಯ ಕಥೆಯ ಹಿಂದಿನ ವ್ಯಾಖ್ಯಾನ.

ಈ ಕುರ್ಚಿಯ ಕಥೆಯ ಹಿಂದೆ ಒಂದು ರೋಚಕ ಹೊಡೆದಾಟದ ಕಥೆಯೇ ಯುರೋಪ್‌ನಲ್ಲಿ ಚಲಾವಣೆಯಲ್ಲಿದೆ. ನಾಲ್ಕುಕಾಲಿನ-ಒರಗಿಕೊಳ್ಳಲು ಹಿತವಾಗಿರುವ ಎರಡು ಕೈಗಳನ್ನು ಆರಾಮವಾಗಿ ಇರಿಸಲನುಕೂಲವಾಗುವಂತೆ ನಿರ್ಮಾಣಕ್ಕೆ ಮೂರು ಸಾವಿರ ವರ್ಷದ ಹಿಂದಿನ ರಾಜನೋರ್ವನ ಕಥೆ ಮಿಳಿತಗೊಂಡಿದೆ.

ಮೂರು ಸಾವಿರ ವರ್ಷದ ಹಿಂದೆ ಮಂಗೋಲಿಯಾದ ರಾಜನೊಬ್ಬ ಪ್ರಜಾನುರಾಗಿಯಾಗಿದ್ದು -ಪ್ರತಿ ತಿಂಗಳಿಗೊಮ್ಮೆ ಊರ ಪ್ರಮುಖರು ಹಾಗೂ ರಾಜ್ಯದಾದ್ಯಂತದಿಂದ ಪ್ರಜಾ ಪ್ರಮುಖರನ್ನು ತನ್ನ ಅರಮನೆಗೆ ಆಹ್ವಾನಿಸಿ ರಾಜ್ಯದ ಕುಂದುಕೊರತೆಯ ಕುರಿತು ಅಹವಾಲು ಕೇಳುವ ಹಾಗೆಯೇ ಅದಕ್ಕೆ ಪರಿಹಾರ ಸೂಚಿಸುವ ಪರಿಪಾಠವಿರಿಸಿಕೊಂಡಿದ್ದ. ಆಗ ಪ್ರಜೆಗಳು ಸೂಕ್ತ ಆಸನಗಳಿಲ್ಲದೆ ನೆಲದ ಮೇಲೆ ಹಾಸಿದ ಜಮಖಾನೆಯ ಮೇಲೆ ಕುಳಿತುಕೊಳ್ಳಬೇಕಾದ ಅನಿವಾರ್ಯತೆಯಿತ್ತು. ಆದರೆ ಸೂಕ್ತ ಆಸನ ವ್ಯವಸ್ಥೆ ಮಾಡಲು ಪ್ರಯತ್ನ ಪಟ್ಟರೂ ಮನಸ್ಸಿಗೊಪ್ಪುವ ಆಸನದ ಮಾದರಿ ಸಿಕ್ಕಿರಲಿಲ್ಲ.

ಆಸನದ ಮಾದರಿಗಳನ್ನು ಮಾಡಲು - ಹಾಗೂ ಅದನ್ನು ಪ್ರದರ್ಶಿಸಲು ರಾಜ್ಯದ ಬಡಗಿಗಳು, ಕಮ್ಮಾರರಿಗೆ, ಕರೆ ನೀಡಿದ. ಜನತೆಯ ಮನಸ್ಸಿಗೊಪ್ಪುವ, ದೇಹಕ್ಕೆ ಮುದನೀಡುವ ಮಾದರಿಯ ಆಸನಗಳನ್ನು ತಯಾರಿಸಿ ತಂದು ಪ್ರದರ್ಶಿಸಿದರೆ ಒಪ್ಪಿತವಾದ ಮಾದರಿಗೆ ಬಹುಮಾನ, ಹಾಗೂ ನೂರಾರು ಸಂಖ್ಯೆಯಲ್ಲಿ ತಯಾರಿಸಿ ನೀಡಲು ಅನುಮತಿ ನೀಡಲಾಗುವುದೆಂದು ಘೋಷಿಸಿದ.

ರಾಜ್ಯದ ಬಡಗಿಗಳು-ಕಮ್ಮಾರರು, ಕಲಾಕಾರರು ಕಾರ್ಯಪ್ರವೃತ್ತರಾದರು. ರಾಜ್ಯದಾದ್ಯಂತದಿಂದ ಮುಂದಿನ ಒಂದು ತಿಂಗಳಿನಲ್ಲಿ ನೂರಾರು ಸಂಖ್ಯೆಯಲ್ಲಿ ತಯಾರಿಸಿ ನೀಡಲು ಅನುಮತಿ ನೀಡಲಾಗುವುದೆಂದು ಘೋಷಿಸಿದ.

ರಾಜ್ಯದಾದ್ಯಂತದಿಂದ ಮುಂದಿನ ಒಂದು ತಿಂಗಳಿನಲ್ಲಿ ನೂರಾರು ಮಾದರಿಯ ಆಸನಗಳು ಅರಮನೆ ತಲುಪಿದುವು.

ಆ ರಾಜ್ಯದ ಓರ್ವ ಬಡಗಿಯು ಸಾಕಷ್ಟು ಚಿಂತನೆ ನಡೆಸಿದರೂ ಸೂಕ್ತ ಉಪಾಯ ಕಾಣದೆ - ತನ್ನ ಮನೆಯಲ್ಲಿ ಮಣ್ಣಿನಿಂದ ತಯಾರಿಸಿದ ಕುಳಿತುಕೊಳ್ಳಲನುಕೂಲವಾಗಿರುವ ಆ ಮಣ್ಣಿನ ದಿಬ್ಬದಲ್ಲಿಯೇ ಎರಡು ಕೈಗಳನ್ನು ಆರಾಮವಾಗಿ ಇಟ್ಟುಕೊಳ್ಳಲು ಸಾಧ್ಯವಾಗಿರುವುದನ್ನೇ ಮಾದರಿಯಾಗಿಟ್ಟುಕೊಂಡ

ಬಡಗಿ ಪ್ರಸ್ತುತ ಹೆಚ್ಚು ಪ್ರಚಲಿತವಿರುವ ನಾಲ್ಕು ಕಾಲುಗಳ - ಒರಗು ವ್ಯವಸ್ಥೆಯೊಂದಿಗೆ ಎರಡು ಕೈ ಹಿಡಿಕೆಯಿರುವ ಮಾದರಿಯನ್ನು ತಯಾರಿಸಿ ಕುಳಿತು ಆನಂದಿಸಿದ. ತನ್ನ ಮಾದರಿಯನ್ನು ಅರಮನೆಗೆ ಕೊಂಡೊಯ್ದು ಒಂದೆಡೆ ಇರಿಸಿ, ಪರೀಕ್ಷಾ ಸಮಯಕ್ಕಾಗಿ ಕಾದು ಕುಳಿತ.

ರಾಜ ಮತ್ತು ಊರ ಗಣ್ಯರು ಮಾದರಿಯ ಪರಿಕ್ಷೆಗಾಗಿ ಒಂದೊಂದೇ ಮಾದರಿಯನ್ನು ನೋಡುತ್ತಾ ಬಂದರು. ಪ್ರಥಮ ಬಾರಿಗೆ ಎಲ್ಲಾ ಮಾದರಿಯ ವೀಕ್ಷಣೆ ಮಾಡಿದ ನಂತರ ಆಯ್ಕೆಗಾಗಿ ಮತ್ತೊಮ್ಮೆ ವೀಕ್ಷಿಸಲಾರಂಭಿಸಿದಾಗ ಪ್ರತಿಯೊಬ್ಬ ಬಡಗಿ ಹಾಗೂ ತಯಾರಕನೂ ತನ್ನ ಮಾದರಿಯನ್ನೇ ರಾಜ ಒಪ್ಪಲಿ, ಒಪ್ಪಿದರೆ ನೂರಾರು ಕುರ್ಚಿಗಳಿಗೆ ಬೇಡಿಕೆ ಸಿಗುವುದೆಂದು ತನ್ನ ಮಾದರಿಗಳನ್ನು ಮುಂದೆ ಮುಂದೆ ತಳ್ಳಲಾರಂಬಿಸಿದರು. ಆಗ ನಡೆದ ಅಭೂತ ಪೂರ್ವ ಕಿತ್ತಾಟದಲ್ಲಿ - ಪ್ರಥಮ ಪರಸ್ಪರ ಬೈಗುಳಗಳಾದರೇ ಅನಂತರ ಹೊಡೆದಾಟ ತಯಾರಕರ ನಡುವೆ ಆರಂಭವಾಯಿತು. ಕೊನೆಯಲ್ಲಿ ತಯಾರಕರು ಪರಸ್ಪರ ತಮ್ಮ ತಯಾರಿಕೆಯ ಆಸನಗಳನ್ನೆ ಎತ್ತಿ ಬಡಿದಾಡ ತೊಡಗಿದರು. ಆದರೆ ಈ ನಡುವೆ ಉತ್ತಮ ಮಾದರಿಯದೆಂದು ಪ್ರಶಂಸೆಗಳಿಸಿದ ಬಡಪಾಯಿ ಬಡಗಿ ಉಳಿದವರ ಹೋರಾಟದಲ್ಲಿ ಭಾಗಿಯಾಗದೆ ಮೂಲೆಯೊಂದರಲ್ಲಿ ಕುಳಿತಿದ್ದ.

ರಾಜನ ಆಸ್ಥಾನ ರಣರಂಗವಾಯಿತು. ತಯಾರಕರ ಆಸನಗಳೆಲ್ಲಾ ಹೊಡೆದಾಟದಲ್ಲಿ ಪುಡಿ ಪುಡಿಯಾದವು. ಅನಂತರ ಅಲ್ಲಿಗೆ ಸೇನೆಯನ್ನು ಕರೆಸಿದ ರಾಜ ಹೊಡೆದಾಟದಲ್ಲಿ ಮಗ್ನರಾದವರನ್ನು ಬಂಧಿಸಿದ. ಆಸ್ಥಾನ ರಣರಂಗವಾದರೂ ಮೆಚ್ಚುಗೆ ಗಳಿಸಿದ ಮಾದರಿಯೊಂದಿಗೆ ಕುಳಿತಿದ್ದ ಬಡಪಾಯಿ ಬಡಗಿಗೆ ಸಹಸ್ರಾರು ಕುರ್ಚಿಗಳನ್ನು ತಯಾರಿಸಿ ನೀಡಲು ಅನುಮತಿ ನೀಡಲಾಯಿತು.

ಇದು ಮುಂದಿನ ಕುರ್ಚಿಯು ತಯಾರಾದ ರೋಚಕ ಸನ್ನಿವೇಶ. ಅಂದಿನ ಆರಂಭದ ಘಟನೆ ಇಂದಿಗೂ ಕುರ್ಚಿಗಾಗಿ ಮರುಕಳಿಸುತ್ತಿರುವುದು ವಿಚಿತ್ರವೆನ್ನಿಸಬಹುದಲ್ಲವೇ?

# 'ಹೂವಿನ ಕೋಲು' - ಅಂದು - ಇಂದು

-ಶಿವಯ್ಯನಾವಡ

ಸುಮಾರು ಹದಿನಾಲ್ಕು ವರ್ಷ ಪ್ರಾಯದೊಳಗಿನ ಇಬ್ಬರು ಹುಡುಗರು ಭಾಗವತರು ಬರೆದುಕೊಟ್ಟ ಸಂವಾದದ ಪದಗಳಿಗೆ ಅರ್ಥವನ್ನು ಕಂಠಸ್ಥ ಮಾಡಿಕೊಂಡು ನವರಾತ್ರಿಯ ಒಂಭತ್ತು ಯಾ ಹತ್ತು ದಿನಗಳ ಅವಧಿಯಲ್ಲಿ ಭಾಗವತ, ಮದ್ದಲೆಗಾರ ಮತ್ತು ಶ್ರುತಿಗಾರ ಜೊತೆಯಲ್ಲಿ ಊರಿನ ಹಾಗೂ ಅಕ್ಕಪಕ್ಕದೂರಿನ ಗಣ್ಯರ ಮತ್ತು ಪ್ರೀತ್ಯಾದರಗಳನ್ನು ತೋರಿಸುವ ಕಲಾಸಕ್ತರ ಮನೆಗಳಲ್ಲಿ ಸುಮಾರು ಇಪ್ಪತ್ತು-ಮೂವತ್ತು ನಿಮಿಷಗಳವರೆಗೆ ನಡೆಯುವ ಸಾಂಪ್ರದಾಯಿಕ ಕಲೆ ಹೂವಿನಕೋಲು. ಹೆಸರೇ ಸೂಚಿಸುವಂತೆ ಬಣ್ಣ ಬಣ್ಣದ ಕಾಗದಗಳಿಂದ ಹಾಗೂ ಜರಿಗಳಿಂದ ತಯಾರಿಸಲ್ಪಟ್ಟ ಸುಮಾರು ಒಂದೂವರೆ ಅಡಿಯಷ್ಟು ಎತ್ತರದ, ನೆಲದಲ್ಲಿ ನಿಲ್ಲುವಂತೆ ವ್ಯವಸ್ಥೆಗೊಳಿಸಲಾದ ಹೂವಿನ ಕೋಲನ್ನು ಕೈಯಲ್ಲಿ ಹಿಡಿದು ಖಾಕಿ ಚಡ್ಡಿ, ಬಿಳಿ ಅಂಗಿ ಮತ್ತು ಬಿಳಿ ಟೋಪಿ ಧರಿಸುವ ಚಿಣ್ಣರು ಹೇಳುವ 'ಚೌಪದ' - ಹೂವಿನ ಕೋಲಿನ ಪ್ರಾರಂಭ. ಹತ್ತು-ಹದಿನೈದು ನಿಮಿಷಗಳವರೆಗೂ ಸಾಗುವ ಚೌಪದ ಕೆಲವೊಮ್ಮೆ ಭಾಗವತರ ಸನ್ನೆಯಿಂದ ಮೊಟಕುಗೊಳಿಸಿ 'ಸ್ವಸ್ತಿ ರೈ'ಎನ್ನುವ ಚಗಣದ ಚೌಪದವನ್ನು ಹೇಳಿ ಮುಗಿಸಿದ ನಂತರ ಭಾಗವತರು ಪದ ಹೇಳುತ್ತಾರೆ. ವಿಶೇಷ ಆಲಾಪನೆಯನ್ನಾಗಲೀ, ಚಾಲೂ ಕುಣಿತಕ್ಕೆ ಮದ್ದಲೆಗಾರ ಮದ್ದಲೆಯ ನುಡಿತವನ್ನು ಧಾರಾಳವಾಗಿ ಉಪಯೋಗಿಸುವುದಕ್ಕಾಗಲೀ ಆಸ್ಪದವಿರುವುದಿಲ್ಲ. ಪದ ಮುಗಿದ ನಂತರ ಚಿಣ್ಣನೊಬ್ಬ ಅರ್ಥ ಹೇಳಿ ಮುಗಿಸಿದ ನಂತರ ಪುನಃ ಪದ ಪ್ರಾರಂಭವಾಗುತ್ತದೆ. ತಾಳಮದ್ದಳೆಯಂತೆ ವಿವರವಾದ ಅರ್ಥಗಾರಿಕೆಯಿರುವುದಿಲ್ಲ. ಭಾಗವತ ಹಾಗೂ ಮದ್ದಲೆಗಾರರಿಬ್ಬರೂ ಪೇಟವನ್ನಾಗಲೀ ಕೈಬಳೆ, ಗುಂಡುಸರಗಳನ್ನು ಧರಿಸುವುದಿಲ್ಲ. ಕಚ್ಚೆ ಪಂಚೆ, ಹೆಗಲ ಮೇಲೊಂದು ಶಾಲು ಯಾ ಟವೆಲು, ಬಿಳಿ ಜುಬ್ಬಾ ಧರಿಸಿರುತ್ತಾರೆ.

ಎಳೆಯರ ಬಾಯಿಯಿಂದ ಹೊರಡುವ ಮಾತಿನ ಉಚ್ಚಾರಣೆ, ಒತ್ತು ಹಾಗೂ ಗತ್ತು. ಅವರಲ್ಲಿರುವ ಶ್ರದ್ಧೆ ಆಸಕ್ತಿಗಳನ್ನು ಮನೆಯವರು ಗಮನಿಸಿ ಚಿಣ್ಣರನ್ನು ಪ್ರೋತ್ಸಾಹಿಸಿ, ಉಪಚಾರದ ಮಾತುಗಳನ್ನು ಹೇಳಿ ಚಕ್ರ (ನಾಲ್ಕಾಣೆ), ಎರಡು ಚಕ್ರ (ಎಂಟಾಣೆ) ಹಾಗೂ ಪಾವಲಿ (ರೂಪಾಯಿ ನಾಣ್ಯ)- ಈ ಮೂರರಲ್ಲೊಂದನ್ನು

ಮಕ್ಕಳಿಗೆ ಕೊಟ್ಟು ಭಾಗವತರಿಗೆ 'ಮರ್ಯಾದೆ'ಯನ್ನು ನೀಡಿ, ಮಕ್ಕಳನ್ನು ತರಬೇತಿಗೊಳಿಸಿದ್ದರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುವುದಲ್ಲದೇ ಇನ್ನೊಂದು ಪ್ರದರ್ಶನ ನೀಡಿ ಎಂದೂ ಕೇಳುತ್ತಾರೆ.

ಪ್ರಥಮ ನವರಾತ್ರಿಯಂದು ಭಾಗವತರು ತಮ್ಮ ಊರಿನ ದೇವಸ್ಥಾನದಲ್ಲಿ 'ಹೂವಿನ ಕೋಲಿ'ಗೆ ಪೂಜೆ ಮಾಡಿಸಿ ಬೆಳಿಗ್ಗೆ ಸುಮಾರು ಒಂಭತ್ತು ಗಂಟೆಯಿಂದ ರಾತ್ರಿ, ಒಂಭತ್ತು ಗಂಟೆಯವರೆಗೆ ಸಾಗುವ ಈ ಪ್ರದರ್ಶನ, ಕೊನೆಯ ನವರಾತ್ರಿ (ವಿಜಯದಶಮಿ) ದಿನದ ಭಾಗವತರ ಮನೆಯಲ್ಲೇ ಆ ರಾತ್ರಿ 'ಮಂಗಳ'ವನ್ನು ಹೇಳಿ ತಿರುಗಾಟವನ್ನು ಮುಗಿಸುತ್ತಾರೆ. ಹೂವಿನ ಕೋಲಿನ ಇಷ್ಟೂ ದಿನದ 'ತಿರುಗಾಟ'ದಲ್ಲಿ ಯಾವುದೇ ಮನೆಯಲ್ಲೂ 'ಮಂಗಲ'ಕ್ಕೆ ಸಂಬಂಧಿಸಿದ ಪದಗಳನ್ನು ಹೇಳುವುದಿಲ್ಲ. ಹಾಗೂ ಪ್ರದರ್ಶನದ ಪ್ರಾರಂಭಕ್ಕೆ ಗಜಮುಖನ ಸ್ತುತಿಯನ್ನೂ ಹೇಳುವುದಿಲ್ಲ. ಚಿಣ್ಣರು ಚೌಪದವನ್ನು ಹೇಳಿ ಮುಗಿಸಿದ ನಂತರ ಭಾಗವತರು ಪದವನ್ನು ಹೇಳಲು ಪ್ರಾರಂಭಿಸುತ್ತಾರೆ.

ಹೂವಿನಕೋಲು ತಿರುಗಾಟವು ಕಾಲ್ನಡಿಗೆಯಲ್ಲೇ ಸಾಗುತ್ತದೆ. ಶ್ರುತಿಗಾರರು ಹಾರ್ಮೋನಿಯಂ ಹಾಗೂ ಮದ್ದಲೆಯನ್ನು ಹೆಗಲಿಗೇರಿಸಿಕೊಳ್ಳುತ್ತಾರೆ. ಚಿಣ್ಣರೂ ಕೂಡಾ ಸಂಭಾವನೆಯನ್ನು ಪಡೆಯುತ್ತಾರೆ.

ಹೀಗೆ ಸಾಗಿ ಬಂದ ಈ ಸಂಪ್ರದಾಯಕಲೆಗೆ ಆಕರ್ಷಣೆ ಹೆಚ್ಚಿ ಎಳೆಯರು ಆಷಾಢಮಾಸದಲ್ಲಿ ಭಾಗವತರ ಮನೆಗೆ ಪದೇ ಪದೇ ಹೋಗಿ ತಮ್ಮಲ್ಲಿರುವ ಆಸಕ್ತಿಯನ್ನು ಅರ್ಥಗಳನ್ನು ಹೇಳುವ ಮೂಲಕ ಭಾಗವತರಿಗೆ ತೋರ್ಪಡಿಸುತ್ತಿದ್ದುದರಿಂದ ಮಕ್ಕಳಿಗೆ ನಿರಾಶೆಯಾಗಬಾರದೆಂಬ ಎಣಿಕೆಯಿಂದ ಅರ್ಹ ನಾಲ್ಕು ಮಕ್ಕಳನ್ನು ಆಯ್ಕೆ ಮಾಡಿ ಹೂವಿನ ಕೋಲಿನ ಜತೆಗೆ ಕೋಲಾಟವನ್ನು ಸೇರಿಸಿ ಯಶಸ್ವಿಯಾದವರಲ್ಲಿ ದಿವಂಗತ ಶ್ರೀ ಗುಂಡ್ಮಿ ರಾಮಚಂದ್ರ ನಾವಡರು ಮೊದಲಿಗರು. ಕೆಲವು ವರ್ಷಗಳ ನಂತರ ಸೇರ್ಪಡೆಗೊಂಡ ಕೋಲಾಟವನ್ನು ಅವರೇ ಸ್ಥಗಿತಗೊಳಿಸಿದರು. ಏಕಕಾಲದಲ್ಲಿ ಮನೆಯನ್ನು ಹೂವಿನ ಕೋಲಿನ ಎರಡೂ ತಂಡಗಳು ಪ್ರವೇಶಿಸಿದ್ದಾಗ್ಯೂ, ಅಲ್ಲಿ 'ಸ್ಪರ್ಧೆ' ನಡೆಯುವುದಿಲ್ಲ. ಒಂದು ತಂಡದ ಪ್ರದರ್ಶನವಾದ ನಂತರ ಇನ್ನೊಂದು ತಂಡ ಪ್ರದರ್ಶನ ನೀಡುತ್ತದೆ. ಎರಡೂ ತಂಡಗಳು 'ಮರ್ಯಾದೆ'ಯನ್ನು ಪಡೆಯುತ್ತವೆ.

ಎಳೆಯರಲ್ಲಿ ಅಡಕವಾಗಿರುವ ಕಲಾಪ್ರತಿಭೆಯನ್ನು ಸೂಕ್ಷ್ಮವಾಗಿ ಗುರುತಿಸಬಹುದಾದ ಈ ಸಂಪ್ರದಾಯ ಕಲೆಯು ಎಂಭತ್ತರ ದಶಕದ ನಂತರ ಅತಿ ವಿರಳವಾಗಿ ಕಾಣಸಿಗುತ್ತದೆ.

ಕಳೆದ ಎಂಟು ವರ್ಷಗಳಿಂದ ಈ ಸಾಂಪ್ರದಾಯಕ ಕಲೆಯು ಪುನಃಶ್ಚೇತನ ಗೊಳ್ಳುತ್ತಿರುವುದು ಸಂತಸದ ವಿಷಯ. ಇತ್ತೀಚಿಗೆ ಹೆಣ್ಣುಮಕ್ಕಳು ಕೂಡಾ ಈ ಹೂವಿನ ಕೋಲಿನಲ್ಲಿ ಭಾಗವಹಿಸುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ದಿವಂಗತ ಐರೋಡಿ ಸದಾನಂದ ಹೆಬ್ಬಾರರ ನೇತೃತ್ವದಲ್ಲಿ ಈ ಕಲೆಯ ಪುನಃಶ್ಚೇತನವಾಗಿರುವುದು ನಮ್ಮ ಸೌಭಾಗ್ಯ. ಹಾಗಿದ್ದರೂ ಕೇವಲ ಮನರಂಜನೆಗಾಗಿ ಹಾಗೂ ಸ್ಪರ್ಧೆಗಳಲ್ಲಿ ಪ್ರಶಸ್ತಿ ಗಿಟ್ಟಿಸುವುದಕ್ಕಾಗಿ ಕಲೆಯ ಸ್ವರೂಪ ಮತ್ತು ಆಶಯಕ್ಕೆ ಭಂಗ ಉಂಟಾಗುವ ರೀತಿಯಲ್ಲಿ ಹೆಚ್ಚಿನ ಕಲಾವಿದರು ಪ್ರದರ್ಶನ ನೀಡುತ್ತಿರುವುದು ಖೇದಕರವಾದ ಸಂಗತಿ. ಹೀಗಾಗಿರುವುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡುತ್ತೇನೆ-

1. ಪದವನ್ನು (ಪದ್ಯವನ್ನು) ಅತಿಯಾಗಿ ಪುನರಾವರ್ತನೆಗೊಳಿಸುತ್ತಾ ಹೇಳುವುದು
2. ಚಾಲು ಕುಣಿತದ ಹಲವಾರು ವೈವಿಧ್ಯಗಳ ಮದ್ದಳೆ ನುಡಿತಗಳು.

(ಇನ್ನೂ ಹಲವು ಉದಾಹರಣೆಗಳನ್ನು ಪತ್ರಿಕಾ ಲೇಖನದ ಪರಿಮಿತಿಯ ದೃಷ್ಟಿಯಿಂದ ಇಲ್ಲಿ ಪ್ರಸ್ತಾಪಿಸಿಲ್ಲ.)

ತಾಳಮದ್ದಲೆಯಂತೆ ಯಕ್ಷಗಾನ ಕಲೆಯ ಉಪಾಂಗವಾದ ಹೂವಿನಕೋಲು ಪ್ರದರ್ಶನವು ಯಕ್ಷಗಾನದಂತೆ ನಾಟ್ಯ ಶಾಸ್ತ್ರದ ನಾಲ್ಕು ಅಂಗಗಳನ್ನು (ವಾಚಿಕ, ಆಂಗಿಕ, ಆಹಾರ್ಯ ಮತ್ತು ಸಾತ್ವಿಕ) ಹೊಂದಿಲ್ಲ. ಎಳೆಯರಲ್ಲಿ ಯಕ್ಷಗಾನದ ಒಲವು ಮೂಡಿಸುವುದಕ್ಕಾಗಿ 'ಸಾತ್ವಿಕಅಂಗ'ದಲ್ಲಿ ತರಬೇತಿ ನೀಡಿ ಪ್ರದರ್ಶಿಸುವ ಕಲೆಯು 'ಹೂವಿನಕೋಲು'ಎಂದು ಸುಮಾರು ಆರು ಶತಮಾನಗಳಷ್ಟು ಹಿಂದೆ (ಯಕ್ಷಗಾನಕ್ಕಿರುವ ಇತಿಹಾಸದಷ್ಟೇ) ಅಕ್ಷರ ಕಲಿಕಾಕೇಂದ್ರವಾಗಿದ್ದು 'ಐಗಳ ಮಠ'ದಲ್ಲಿ ಜನಿಸಿದ್ದಾಗಿರುತ್ತದೆ. ಇಂತಹ ಪಾರಂಪರಿಕ ಕಲೆಯ 'ತನ್ನತನ'ವನ್ನು ಉಳಿಸಿ ಬೆಳೆಸುವತ್ತ ಕಲಾವಿದರು ಪ್ರಯತ್ನಿಸಿ ಸಫಲರಾಗಿ ಕಲೆಯನ್ನು ಪ್ರದರ್ಶಿಸಬೇಕೆಂಬುದು ಈ ಲೇಖನದ ಆಶಯ.



# ಅಡಿಗರ 'ಆಚಾರ್ಯರಿಗೆ ನಮಸ್ಕಾರ'

-ಬಿ.ವಿ.ಕೆದಿಲಾಯ

'ಬತ್ತಲಾರದ ಗಂಗೆ' ಸಂಕಲನದಲ್ಲಿ ಸೇರಿರುವ 'ಆಚಾರ್ಯರಿಗೆ ನಮಸ್ಕಾರ' ಅಡಿಗರ ಉತ್ತಮ ಕವನಗಳಲ್ಲಿ ಒಂದು. ಪ್ರತಿಯೊಬ್ಬ ಸಾಧಕನಿಗೂ ಜೀವನದ ಒಂದು ಹಂತದಲ್ಲಿ ಗುರು ಅಥವಾ ಆಚಾರ್ಯ ಅಥವಾ ಗುರು ಪ್ರಾಚೀನ ಕಾಲದವನಿರಬಹುದು ಅಥವಾ ವರ್ತಮಾನ ಕಾಲದವನೇ ಇರಬಹುದು. ಅವನು ಪ್ರತಿಪಾದಿಸುವ ತತ್ವಗಳು, ತೋರಿಸುವ ದಾರಿ, ಸಾಧಿಸಿದ ಗುರಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರಬಹುದು. ಗುರು ಸೂಚಿಸುವ ದಾರಿಯಲ್ಲಿ ಶಿಷ್ಯನ ಪಯಣ ಹೇಗಿರುತ್ತದೆ? ಅಲ್ಲಿ ಎದುರಾಗುವ ಸಮಸ್ಯೆಗಳೇನು ? ಅವುಗಳನ್ನು ಪರಿಹರಿಸಿಕೊಂಡು ಮುನ್ನಡೆಯುವ ಬಗೆ ಹೇಗೆ? ಎಲ್ಲಿಯವರೆಗೆ ಗುರುವಿನ ಉಪದೇಶಗಳೂ, ನಿರ್ದೇಶನಗಳೂ ಶಿಷ್ಯನನ್ನು ಮುನ್ನಡೆಸಲು ಸಾಧ್ಯ? ಆ ಮಿತಿಗಳನ್ನು ದಾಟಿದ ನಂತರ ಶಿಷ್ಯನ ಗತಿ ಏನು ? ಇಂಥ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಸಾಧಕನ ಗಂಭೀರ ಪ್ರಯತ್ನಗಳು ಹಾಗೂ ಅವುಗಳಿಂದ ಬರುವ ಅರಿವು ಈ ಕವನದ ಮೂಲ ದ್ರವ್ಯವಾಗಿದೆ. 'ಆಚಾರ್ಯದಿಗೆ ನಮಸ್ಕಾರ' ಎಂಬ ಶೀರ್ಷಿಕೆ ಮೇಲುನೋಟಕ್ಕೆ ಯಾವುದೋ ಕುಲದ' ಆಚಾರ್ಯರನ್ನೋ, ಮಹಾಪುರುಷರನ್ನೋ ಸ್ತುತಿ ಮಾಡುವ ಪ್ರಕ್ರಿಯೆಯನ್ನು ಸೂಚಿಸಿದರೂ ಕವನದ ಆಶಯ ಅದಲ್ಲ. 'ನಮಸ್ಕಾರ' ಎಂಬ ಶಬ್ದದಲ್ಲಿಯ ಗೌರವಸೂಚಕ ವಾಚ್ಯಾರ್ಥದ ಜತೆಗೇ 'ಇನ್ನು ನಿಮ್ಮ ಸಹವಾಸ ಸಾಕು' (ಉದಾ: ಸಿಗರೇಟಿಗೆ ನಮಸ್ಕಾರ) ಎಂಬ ರೂಢಿಯ ಆಡುಮಾತಿನಲ್ಲಿ ಅಡಗಿರುವ ವ್ಯಂಗ್ಯಾರ್ಥವನ್ನೂ ಇಲ್ಲಿ ಗ್ರಹಿಸಬಹುದು. ಏಕೆಂದರೆ ಈ ಕವನದಲ್ಲಿ ಸಾಧಕನು ಗುರುವಿನಿಂದ ಪಡೆಯಬಹುದಾದ್ದನ್ನು ಪಡೆದ ಮೇಲೆ ಗುರುವಿಗೆ ಕೊನೆಯ ನಮಸ್ಕಾರ ಹಾಕಿ ತಾನೇ ತನ್ನ ದಾರಿ ಕಂಡುಕೊಂಡು ಮುನ್ನಡೆಯಬೇಕಾದ ಸಾಹಸ ಯಾತ್ರೆ ಮುಖ್ಯವಾಗುತ್ತದೆ. ಕವನದ ಮೊದಲ ಸ್ಟಾಂಜಾದಲ್ಲಿ ಆಚಾರ್ಯರಿಗೆ, ಆಚಾರ್ಯತ್ರರಿಗೆ, ಆಚಾರ್ಯ ಕುಲಕ್ಕೆ ನಮಸ್ಕಾರ ಹಾಕುವುದು ಸುಲಭವೂ ಹೌದು, ಕಷ್ಟವೂ ಹೌದು ಎಂಬ ತೋರಿಕೆಯ ವಿರೋಧಾಭಾಸ ಕಾಣುತ್ತದೆ.

ಆದರೆ ಅದರ ಕೊನೆಯಲ್ಲಿ ಸಾಲು 'ನಿಮ್ಮ ನಿಷ್ಠೆಗೆ ತಕ್ಕ ನಿತ್ಯಕ್ರಮ' ಈ ಸಂದಿಗ್ಧವನ್ನು ನಿವಾರಿಸುತ್ತದೆ. ನಮ್ಮ ನಿಷ್ಠೆಗೆ ಸಲ್ಲುವ ಆಚಾರ್ಯಗೆ ನಮಸ್ಕಾರ ಹಾಕುವುದು ಸುಲಭ. ಅನ್ಯ ಆಚಾರ್ಯರುಗಳಿಗೆ ನಮಸ್ಕಾರ ಹಾಕುವುದು ಕಷ್ಟ. ಉದಾಹರಣೆಗೇ ಅದ್ವೈತಿಗಳಿಗೆ ಶಂಕರಾಚಾರ್ಯರಿಗೆ ನಮಸ್ಕಾರ ಹಾಕುವುದು ಸುಲಭ. ಹಾಗೇ ದ್ವೈತಿಗಳಿಗೆ ಮಧ್ವಾಚಾರ್ಯರನ್ನು ನಮಸ್ಕರಿಸುವುದು ಸುಲಭ. ಆದರೆ ಆಯಾ ಆಚಾರ್ಯರನ್ನು ಬಿಟ್ಟು ಇತರ ಆಚಾರ್ಯರಿಗೆ ನಮಸ್ಕಾರ ಹಾಕುವುದು ಕೊಂಚ ಕಷ್ಟದ ಸಂಗತಿ. ಆಚಾರ್ಯರೆಲ್ಲ ಮಹಾತ್ಮರೇ ಆಗಿರಬಹುದು. ಆದರೆ ನಮ್ಮ ವೈಯಕ್ತಿಕ ನಿಷ್ಠೆ ಅವರ ಬಗ್ಗೆ ನಮ್ಮ ಭಾವನೆಗಳಲ್ಲಿ ತಾರತಮ್ಯವನ್ನು ಹೇಗೆ ಕಾಣುತ್ತದೆ ಎನ್ನುವ ಸೂಕ್ಷ್ಮ ಆಡುಮಾತಿನ ಲಯದಲ್ಲಿ ವ್ಯಕ್ತವಾಗಿದೆ.

ಮುಂದಿನ ಸ್ಟಾಂಜಾದಲ್ಲಿ ವಿವಿಧ ಆಚಾರ್ಯರು ರಚಿಸಿದ ಗ್ರಂಥಗಳಲ್ಲಿ, ಪ್ರತಿಪಾದಿಸಿದ ಸಿದ್ಧಾಂತಗಳಲ್ಲಿ ಕಂಡುಬರುವ ಮೋಕ್ಷದ ಅಥವಾ ಪರಮಗತಿಯ ಪರಿಕಲ್ಪನೆ ಸೂಚಿತವಾಗಿದೆ. ಅದು ವೈಕುಂಠವಿರಬಹುದು, ಕೈಲಾಸವಿರಬಹುದು. ಮತ್ತಾವುದೋ ಇರಬಹುದು. ''ನೀವು ಹತ್ತಿದ ಗಿರಿಶಿಖರದ ದಾರಿಯ ನಕ್ಷೆ ಬರೆದಿಟ್ಟಿದ್ದೀರಿ. ಜತೆಗೇ ಕುಕ್ಷಿಂಭರರ ಕಕ್ಷೆ ಬಿಟ್ಟಿದ್ದೀರಿ ಮಠದ ಕಕ್ಷೆಯೊಳಗೆ.'' ಅರ್ಥಾತ್ ಈಗ ಮಠದಲ್ಲಿರುವ ಶಿಷ್ಯ ಪರಂಪರೆಗೆ ಸೇರಿದ ಜನ ಕೇವಲ ಹೊಟ್ಟೆತುಂಬಿಸಿಕೊಳ್ಳುವರಷ್ಟೆ (ಕುಕ್ಷಿಂಭರರು) ಇಲ್ಲಿ ಬರುವ 'ನಕ್ಷೆ'ಯ ಪ್ರತಿಮೆ ಮುಂದೆ ವಿವಿಧ ಆಯಾಮಗಳನ್ನು ತಳೆಯುತ್ತ, ಬೆಳೆಯುತ್ತ, ಕವನವು ಸಾರ್ಥಕ ಶಿಲ್ಪವಾಗಲು ದುಡಿಯುವ ಪರಿ ತುಂಬ ಸ್ವಾರಸ್ಯಕರವಾಗಿದೆ. ಕವನದ ಸ್ವಾದನೆಗೆ ಈ ಅಂಶವನ್ನು ಗಮನಿಸಬೇಕಾದ್ದು ಅಗತ್ಯ.

ಮೂರನೆಯ ಸ್ಟಾಂಜಾದಲ್ಲಿ 'ಪಾಯಸದಲ್ಲಿ ಬಿದ್ದ ನೊಣದಂತಹ ಅವಸ್ಥೆಯಲ್ಲಿರುವ ಸಾಮಾನ್ಯರ ಪಾಡನ್ನು ವಿಡಂಬಿಸಲಾಗಿದೆ. ಇವರು ಆಚಾರ್ಯರಲ್ಲಿ ದೃಢವಾದ ನಂಬಿಕೆ ಶ್ರದ್ಧೆಭಕ್ತಿಗಳನ್ನು ಹೊಂದಿದವರೂ ಅಲ್ಲ. ಹಾಗೆಂದು ಸಂಪೂರ್ಣ ಶ್ರದ್ಧಾಹೀನರೂ ಅಲ್ಲ. ಹಾಗೊಮ್ಮೆ ಹೀಗೊಮ್ಮೆ ಉಯ್ಯಾಲೆಯಾಡುವ ಚಂಚಲ ಮನಸ್ಸು ಇವರದು. ಹಾಗಾಗಿ-

**ನಿಮ್ಮ ನಾಮ ಮಾತ್ರ ಬಾಯಲ್ಲಿಆಗಾಗ**
**ಹಣೆಯಲ್ಲಿ ಒಮ್ಮೊಮ್ಮೆ**
**ಆಚಾರ್ಯರಿಗೆ ನಾಮ ಆಚಾರದಲ್ಲಿ**

ಇಲ್ಲಿ ನಾಮ ಎಂಬ ಶಬ್ದ ನೀಡುವ ಮೂರೂ (ಹೆಸರು, ಲಾಂಛನ, ಮೋಸ) ಅರ್ಥಗಳನ್ನು ಬಳಸಿಕೊಂಡಿರುವ ಚಮತ್ಕಾರವನ್ನು ಗಮನಿಸಬೇಕು. ಮುಂದಿನ ಸ್ಟಾಂಜಾ ತುಂಬ ಮಹತ್ವದ್ದು.

**ಹಳತಾಗಿ ಹಿಸಿದು ಹರಿಯುವ ಪುರಾತನ ನಕ್ಷೆ**
**ಈಗಲೂ ಇದೆ ನೋಡಿ. ಓದುವುದು ಕಷ್ಟ**
**ನಕ್ಷೆಗೇ ಪೂಜೆ ಭಜನೆ ರಥೋತ್ಸವ ಬೇರೆ**
**ಪಯಣಕೊಗ್ಗದ ನಕ್ಷೆ ಬಲು ಅನಿಷ್ಟ**

ಆಚಾರ್ಯರುಗಳು ಬರೆದಿಟ್ಟು ಹೋಗಿರುವ ನಕ್ಷೆ (ಸಿದ್ಧಾಂತಗಳು, ಶಾಸ್ತ್ರಗಳು, ಪರಿಕಲ್ಪನೆಗಳು ಇತ್ಯಾದಿ) ಹಳತಾಗಿದೆ. ಮುಟ್ಟಿದರೆ ಹಿಸಿದು ಪುಡಿ ಪುಡಿಯಾಗುವಂತಿವೆ. ಅದನ್ನು ಓದಿ, ತಿಳಿದು ಅನುಸರಿಸಿ, ಪಯಣಿಸುವುದು ಕಷ್ಟದ ಕೆಲಸ. ಬಹುಶಃ ಅಸಾಧ್ಯವೇನೋ. ಅದೀಗ ಕೇವಲ ಪವಿತ್ರ ಗ್ರಂಥದಂತೆ ಪೂಜಾವಸ್ತುವಾಗಿ ಬಿಟ್ಟಿದೆ. ಅದಕ್ಕೇ ಪೂಜೆ, ಭಜನೆ ರಥೋತ್ಸವ ನಡೆಯುತ್ತಿದೆ. ಯಾವುದು ಆಚಾರಕ್ಕೆ, ಅನುಷ್ಠಾನಕ್ಕೆ ಕೈಪಿಡಿಯಾಗಿತ್ತೋ ಅದು ಈಗ ಆ ಸಾಮರ್ಥ್ಯವನ್ನು ಕಳೆದುಕೊಂಡಿದೆ. ಈ ಸಾಲುಗಳ ರಚನಾ ಕೌಶಲ, ಆಡುಮಾತಿನ ಶಬ್ದಾಲಯಗಳಲ್ಲೇ ಧ್ವನಿ ಸಮೃದ್ಧ ಕಾವ್ಯ ಸೃಷ್ಟಿಯಾಗುವ ಪವಾಡ ರೋಚಕವಾಗಿದೆ. ಮುಂದಿನ ಸಾಲುಗಳಲ್ಲಿಯೂ ಇದು ಬೆಳೆಯುತ್ತ ಹೋಗುವ ಸೊಗಸನ್ನು ಕಾಣಬಹುದು.

**ಬೆಟ್ಟದ ಬುಡಕ್ಕಷ್ಟೇ ಇದೆ ನೋಡಿ ನಕ್ಷೆಯ ಗುರುತು**
**ಅದರಾಚೆ ಎಲ್ಲ ಬರಿ ಗೋಜಲು ಗೋಜಲು**
**ರಜತಾದ್ರಿಯತ್ತ ಕಡೆ ಎಲ್ಲಿ ಇದೆ ರಾಜಪಥ?**
**ಕಾಂಕ್ರೀಟು ರಸ್ತೆಯುಂಟೆ ವೈಕುಂಠಕೆ?**

ಆಚಾರ್ಯರುಗಳು ಪ್ರತಿಪಾದಿಸಿದ ಸಿದ್ಧಾಂತಗಳು, ಸಾಧನಾಮಾರ್ಗಗಳು ಆ ದಾರಿಯಲ್ಲಿ ನಡೆಯುತ್ತಿರುವ ಸಾಧನಿಕನಿಗೂ ಯಾವುದೋ ಒಂದು ಹಂತದಲ್ಲಿ ಅಸ್ಪಷ್ಟವಾಗುತ್ತವೆ.

ಗೋಜಲಾಗುತ್ತ ಹೋದಂತೆ ಅನುಭವವಾಗುತ್ತದೆ. ಮುಂದುವರಿಯಲು ಕಷ್ಟವಾಗುತ್ತದೆ. ಪರಮಪದಕ್ಕೆ ರಾಜಪಥ, ಕಾಂಕ್ರೀಟು ರಸ್ತೆಗಳಂಥ ಸರಳ ಸುಲಭ ಮಾರ್ಗಗಳುಂಟೆ? ಬಹುಶಃ ಇಲ್ಲ. ಸಾಧಕ ಈ ಹಂತದಲ್ಲಿ ಅನುಭವಿಸುವ ಸಂಕಟ ಈ ಸಾಲುಗಳಲ್ಲಿ ಅತ್ಯಂತ ಸಮರ್ಥವಾಗಿ ವ್ಯಕ್ತವಾಗಿದೆ. ಇದು ಆಧ್ಯಾತ್ಮಿಕ ಸಾಧನೆಯ ಗುರಿಗಳಿಗೇ ಅನ್ವಯಿಸುವ ಮಾತಲ್ಲ. ಲೌಕಿಕ ಜೀವನದ ಯಾವ ಕ್ಷೇತ್ರದಲ್ಲಾದರೂ ಯಾವುದೇ ಉನ್ನತ ಸ್ಥಾನಕ್ಕೇರಬಯಸುವವನಿಗೂ ಅನ್ವಯಿಸಬಹುದು. ಅಲ್ಲಿಗೂ ಸಹ ಸಲೀಸಾದ, ಸುಲಭ, ನೇರ ಕಾಂಕ್ರೀಟು ರಾಜಮಾರ್ಗ ಬಹುಶಃ ಇಲ್ಲ.

ಮುಂದಿನ ಸ್ಟಾಂಜಾದಲ್ಲಿ ಪ್ರತಿಯೊಂದು ಜೀವಕ್ಕೂ ಬುಡ ಬೇರೆ. ನುಡಿನಡೆ ಬೇರೆಯಾದುದರಿಂದ ಕೊನೆಗೆ ಸೇರುವ ದೃಶ್ಯ ಶಿಖರವೊಂದೇ ಆದರೂ, ಅದನ್ನು ತಲುಪಲು ತನ್ನ ದಾರಿಯನ್ನು ತಾನೇ ರಚಿಸಿಕೊಳ್ಳದ ಬೇರೆ ಗತಿಯಿಲ್ಲ ಎನ್ನುವ ಪರಮಸತ್ಯದ ಸಾಕ್ಷಾತ್ಕಾರವನ್ನು ಸೂಚಿಸಲಾಗಿದೆ. ಮತಿಯಲ್ಲಿ ಮಥಿಸಿದ ಕೊನೆ ಘೃತ (ತುಪ್ಪ)ವಾಗಿ ಹಂತ (ಸುಟ್ಟು) ವಾಗಿ ಪರಿಪೂತ (ಪರಿಶುದ್ಧ)ವಾದರೆ ಮಾತ್ರ ಗಟ್ಟಿ ಉಳಿದದ್ದು ವ್ಯರ್ಥ (ಗಷ್ಟು) ಬೌದ್ಧಿಕ ಸ್ತರದಲ್ಲಿ ನಡೆಸುವ ವಾದವಿವಾದ, ತರ್ಕವಿತರ್ಕ, ವಿಚಾರ ಮಥನಗಳಿಂದ ಮೇಲೇರಿ ಆಧ್ಯಾತ್ಮಿಕ ಸ್ತರವನ್ನು ತಲುಪಲು ಸಾಧ್ಯವಾದರೆ ಮಾತ್ರ ಸಾರ್ಥಕ. ಹಾಗಾಗದಿದ್ದರೆ ಹೋರಾಟ ನಿರರ್ಥಕ. ಆಗ ವಸ್ತು-ಚಿತ್ತಗಳ ಸಂಪರ್ಕ ತಪ್ಪುತ್ತದೆ. ಗಾಣದೆತ್ತಿನ ಪರಿಭ್ರಮಣದಂತೆ ಚಲಿಸುತ್ತಿದ್ದರೂ ಪ್ರಗತಿಯಿಲ್ಲದೆ ಇದ್ದಲ್ಲಿಯೇ ಇರುವಂತಾಗುತ್ತದೆ.

**ಭೂಚಕ್ರ ವಿಷ್ಣು ಚಕ್ರಗಳ ಬೆರಳಲಿಲ್ಲಿಟ್ಟು**
**ತಿರುಗಿಸಿದ್ದಾಚಾರ್ಯವರ್ಯರೆಲ್ಲ**
**ಭೂ ಚಕ್ರದಂತೆ ಕತ್ತಲಲ್ಲುರಿದು ನಂದಿದರು**
**ಸ್ವಯಂ ಆಚಾರ್ಯನಾಗದೇ ದಾರಿ ಎಲ್ಲಿ?**

ಜಗತ್ತನ್ನೇ ತಮ್ಮ ತಾತ್ವಿಕ ವಿಚಾರಗಳಿಂದ ಪ್ರಭಾವಿಸಿದ್ದ ಆಚಾರ್ಯರುಗಳೆಲ್ಲ ಒಂದಷ್ಟು ಕಾಲ ಬೆಳಗಿ ಈಗ ಮಾಯವಾಗಿದ್ದಾರೆ. ಅವರು ಪ್ರತಿಪಾದಿಸಿದ ತತ್ವಗಳೇನೋ ಇವೆ. ಆದರೆ ಗುರಿಯನ್ನು ತಲುಪಲು ಅಷ್ಟೇ ಸಾಲದು. ಇಂದಿನ ಸಾಧಕನಿಗೆ 'ಸ್ವಯಂ ಆಚಾರ್ಯನಾಗದೆ ದಾರಿಯಿಲ್ಲ. ಆಚಾರ್ಯರೆಲ್ಲ ಸಾಧಕನಿಗೆ ದಿಕ್ಕನ್ನು ಸೂಚಿಸಬಲ್ಲರಷ್ಟೇ. ಗುರಿಗೆ ತಲುಪಿಸುವುದು ಅವರ ಕೆಲಸವಲ್ಲ. ನಡೆಯಬೇಕಾದವರು ನಾವೇ. ಕವನ ಕೊನೆಯ

ಭಾಗವಲ್ಲಿ 'ಪರಮಪದ ಸೋಪಾನ ವೈಕುಂಠಪಟ' ಎಂಬ ಹೊಸ ಆಯಾಮ 'ನಕ್ಷೆ'ಗೆ ಸೇರ್ಪಡೆಯಾಗುತ್ತದೆ. ಸುಮಾರು ೫೦ ವರ್ಷಗಳ ಹಿಂದೆ 'ಹಾವು ಏಣಿಯಾಟ'ದ ಪಟವನ್ನು ಪರಮಪದ ಸೋಪಾನ ವೈಕುಂಠಪಟವೆಂದು ಕರೆಯುತ್ತಿದ್ದರು. ಯಾವ ಕ್ಷೇತ್ರದಲ್ಲೇ ಆಗಲಿ, ಮಾನವನ ಸಾಧನೆಯ ಮಾರ್ಗದಲ್ಲಿ ಹಾವು ಏಣಿಯಾಟದಂತೆ ಏಳು ಬೀಳುಗಳಿರುವುದು ಸ್ವಾಭಾವಿಕ. ಟಾಗೋರರು ಹೇಳಿದಂತೆ ಅದು 'ಪತನ ಅಭ್ಯುದಯ ಬಂಧುರ ಪಂಥ'. ಇಂಥ ಏಳುಬೀಳುಗಳನ್ನು ಅನುಭವಿಸುತ್ತಲೇ ಎತ್ತರಕ್ಕೇರಲು ಹೋರಾಡುತ್ತಿರುವುದಷ್ಟೇ ಮನುಷ್ಯನ ಪಾಲಿಗೆ ಸಾಧ್ಯ. ಅಂತಿಮ ಪರಿಣಾಮ ಅವನ ಕೈಯಲ್ಲಿಲ್ಲ. (ಭೋಗಿಗಳ ಕುಕ್ಷಿಯ ಗವಾಕ್ಷ = ಹಾವು ಏಣಿ ಆಟದ ನಕ್ಷೆಯಲ್ಲಿ ಹಾವಿನ ಬಾಯಿ ಇರುವ ಚೌಕುಳಿ) ಅದು ಅನೂಹ್ಯ ದೈವ ಚಿಂತನದ ಗುಟ್ಟು. ಜೀವನದಲ್ಲಿ ಗುರಿಯ ದಿಕ್ಕು ತೋರಿಸಲು ಗುರುವೊಬ್ಬ ಬೇಕೆಂಬುದು ನಿಜ. ಕೇವಲ ಗುರುವಿನ ಉಪದೇಶ ಮಾತ್ರದಿಂದಲೇ ಶಿಷ್ಯ ಗುರಿ ತಲುಪಲು ಸಾಧ್ಯವಿಲ್ಲ ಎಂಬುದೂ ಅಷ್ಟೇ ಸತ್ಯ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ದಾರಿಯನ್ನು ತಾನೇ ಕಂಡುಕೊಳ್ಳದೆ, ಸ್ವಸಾಮರ್ಥ್ಯ ಬಳಸಿ ಸಾಧನೆ ಮಾಡಿದ ಮುನ್ನಡೆಯಲು ಸಾಧ್ಯವಿಲ್ಲ. ಆದುದರಿಂದ ಆಚಾರ್ಯರಿಗೆ ಹಾಕುವ ನಮಸ್ಕಾರ ಅವರಿಗೆ ಸಲ್ಲುವ ಗೌರವದ ಸಂಕೇತವೂ ಹೌದು. ಹಾಗೇ ವಿದಾಯದ ಸಂಕೇತವೂ ಹೌದು.



**ಕಾರಂತ ಉವಾಚ**

'ಹೀಗೆ ಹಿರಿಯರ ಮತವೇ ತಮ್ಮ ಮತ' ಎನ್ನುವ ಜೀವಿಗಳ ಪಾಲಿಗೆ ತರ್ಕದ ಒಣ ಜಂಜಾಟವಿಲ್ಲ; ಕೆಲಸ ಸುಲಭ. ಮಿದುಳಿಗೆ ವಿಶ್ರಾಂತಿ ದೊರೆಯಿತು. ಆದರೆ ಅವರ ಬದುಕು ಸಾರ್ಥಕವಾಯಿತೇ ಎಂಬ ಮಾತು ಬಗೆಹರಿಯಲಿಲ್ಲ. ಏಕೆಂದರೆ ಬದುಕು ಅಷ್ಟು ವಿವಿಧವಾಗಿದೆ. ಬದುಕುವ ಜೀವಿಗಳೂ ಅಷ್ಟೆ ವಿವಿಧ. ಅವು ಇದಿರಿಸುವ ಸಮಸ್ಯೆಗಳೂ ಹಲವಾರು. ಇವರಿಂದ ಒಂದೊಂದು ಜೀವಿಯೇ ಇರಲಿ, ತಾನು ನಡೆಯಿಸುವ ಬದುಕು, ಮಾಡಬಹುದಾದ ಕೆಲಸ–ಇವೆಲ್ಲ ಇನ್ನೊಂದು ಜೀವಿಯ ಬದುಕು ಕೆಲಸಗಳ ಪಡಿಯಚ್ಚುಗಳಲ್ಲ.

–ಶಿವರಾಮಕಾರಂತ
(ಬಾಳ್ವೆಯೇ ಬೆಳಕು. ಪುಟ 2)

# ಶ್ರೀ ಸಾಮಾನ್ಯನ ದೃಷ್ಟಿಯಲ್ಲಿ ಅಲ್ಲಮ ಪ್ರಭುವಿನ ವಚನಗಳು

- - ಪ್ರೊ॥ ಎಲ್.ವಿ. ಶಾಂತಕುಮಾರಿ

(ಹಿಂದಿನ ಸಂಚಿಕೆಯಿಂದ ಮುಂದುವರೆದಿದು)

ಅಲ್ಲಮನ ವಚನಗಳಲ್ಲಿ ಮೂರ್ತ ಅಮೂರ್ತ, ದೃಶ್ಯ-ಅದೃಶ್ಯ, ಲೌಕಿಕ-ಅಲೌಕಿಕ, ಒಳಿತು-ಕೆಡಕು, ಸಾಧುತ್ವ ಮತ್ತು ಕ್ರೌರ್ಯ ಎಲ್ಲವೂ ಒಂದಕ್ಕೊಂದು ಪೂರಕವಾಗಿ, ಒಂದರೊಡನೊಂದು ಬೆಸೆದು ಕೊಂಡಿರುವಂತಹ, ವೈರುಧ್ಯಗಳ ಸಂಗಮವನ್ನು ಸಮನ್ವಯವನ್ನು ಕಾಣುತ್ತೇವೆ. ಅವನ ವಚನಗಳಲ್ಲಿ ಕಾಣುವಂತಹ ಪ್ರತಿಮಾವಿಧಾನ, ಆಂಗ್ಲಭಾಷೆಯ ಮೆಟಫಿಸಿಕಲ್ ಕವಿ ಡನ್ ಮುಂತಾದವರ, ಅನುಭಾವಿ ಕವಿಬ್ಲೇಕ್, ಅಮೆರಿಕದ ಕವಯಿತ್ರಿ ಎಮಿಲಿ ಡಿಕಿನ್‌ಸನ್ ಮುಂತಾದವರ, ಅನುಭಾವಿ ಪ್ರತಿಮಾ ವಿಧಾನವನ್ನು ನೆನಪಿಗೆ ತರುತ್ತದೆ. ಶರಣ ಮತ್ತು ಗುಹೇಶ್ವರರ ಸಂಬಂಧ, ಹೇಗಿರಬೇಕೆಂಬುದಕ್ಕೆ ಅಲ್ಲಮ ನೀಡುವ ಪ್ರತಿಮೆಗಳು, ನಿದರ್ಶನಗಳು ಹೀಗಿವೆ- ''ಶಿಲೆಯೊಳಗಣ ಪಾವಕದಂತೆ'', ''ಉದಕದೊಳಗಣ ಪ್ರತಿಬಿಂಬದಂತೆ'', ''ಬೀಜದೊಳಗಣ ವೃಕ್ಷದಂತೆ'', ''ಶಬ್ದದೊಳಗಣ ನಿಶ್ಯಬ್ದದಂತೆ'', ಶಿಲೆ, ಉದಕ, ಬೀಜ ಮೂರ್ತವಾಗಿ ನಮ್ಮ ಕಣ್ಣುಗಳಿಗೆ ಕಾಣುವಂತಹದು. ಶಬ್ದ ಕಿವಿಗೆ ಕೇಳುವಂತಹುದು. ಅವುಗಳ ಅಸ್ತಿತ್ವವು ನಮ್ಮ ಬಾಹ್ಯೇಂದ್ರಿಯಗಳಿಗೆ ಅನುಭವ ವೇದ್ಯವಾಗುವಂತಹುದು. ಆದರೆ ಪಾವಕ, ಬೀಜದೊಳಗಣ ವೃಕ್ಷ, ನಿಶ್ಯಬ್ದ ಇವು ಬಾಹ್ಯೇಂದ್ರಿಯಕ್ಕೆ ಅನುಭವವಾಗದಿದ್ದರೂ, ಅವುಗಳ ಅಸ್ತಿತ್ವದ ಬಗೆಗೆ ನಮಗೆ ನಂಬಿಕೆಯಿದೆ. ಹೀಗೆ ಸಾಮಾನ್ಯ ಪ್ರತಿಮೆಗಳ ಮೂಲಕ ತತ್ವಗಳನು, ಚಿಂತನೆಗಳನ್ನು ಸಾಮಾನ್ಯರಿಗೆ ಅರ್ಥವಾಗುವಂತೆ ತಿಳಿಸುತ್ತಲೇ, ನಮ್ಮನ್ನು ಅಚ್ಚರಿಯ ಕಡಲಿಗೆ ತಳ್ಳುವುದು ಅಲ್ಲಮನ ಪ್ರತಿಭಾ ವೈಖರಿ.

ಗುಹೇಶ್ವರನ ಅಸ್ತಿತ್ವ ಎಂತಹುದು ಎಂದು ವಿವರಿಸುವ ಈ ಪುಟ್ಟ ಅಸಾಧಾರಣ ವಚನ ಅಲ್ಲಮನ ವಚನವನ್ನು ಯಾವ ರೀತಿಯಲ್ಲಿ ಅರ್ಥೈಸಬಹುದೆಂಬುದಕ್ಕೆ ಉದಾಹರಣೆಯಾಗುತ್ತದೆ. ತೀರಾ ಸಾಧಾರಣ ಪದಗಳ ಉಪಯೋಗದಿಂದಾಗಿ; ಅರ್ಥ ನುಣುಚಿಕೊಳ್ಳಲೂಬಹುದು.

''ನೆಲದ ಮರೆಯ ನಿಧಾನದಂತೆ

ಮುಗಿಲ ಮರೆಯಲಡಗಿದ ಮಿಂಚಿನಂತೆ

ಬಯಲಮರೆಯಲಡಗಿದ ಮರೀಚಿಯಂತೆ

ಕಂಗಳ ಮರೆಯಲಡಗಿದ ಬೆಳಗಿನಂತೆ–

ವ್ಯಕ್ತ ಅವ್ಯಕ್ತ, ಮೂರ್ತ ಅಮೂರ್ತ, ಪರಸ್ಪರ ಪೂರಕ ವಿರುದ್ಧ ಪ್ರಾಕೃತಿಕ ಪ್ರತಿಮೆಗಳ ಸಂಯೋಜನೆಯಿಂದ ಸಾಮಾನ್ಯನಿಗೆ ಗುಹೇಶ್ವರನ ಇರವನ್ನು ಪರಿಚಯಿಸುವ ಅಲ್ಲಮನ ಪರಿ ಇದು. ನೆಲ ಎಲ್ಲಿ ಕಡೆ ತಾನೇ ತಾನಾಗಿ ಹರಡಿಕೊಂಡು ಕಣ್ಣಿಗೆ ಕಾಣಿಸುವಂತಹ ಅಪರಿಮಿತ ವೈಶಾಲ್ಯವಿರುವಂತಹದೊಂದು ಪ್ರಾಕೃತಿಕ ವಸ್ತು, ದೇವ ಸೃಷ್ಟಿ ಎಂದುಕೊಳ್ಳಬಹುದು. ಗುಹೇಶ್ವರ ಇಂತಹ ಅಗಾಧ ವಿಸ್ತಾರದ ಮರೆಯಲ್ಲಿರುವ ನಿಧಾನದಂತೆ ಅಂದರೆ, ಸಂಪತ್ತಿನಂತೆ. ಈ ಅಡಗಿರುವ ಸಂಪತ್ತು ತನಗೆ ತಾನೇ ಕಾಣಿಸಲು ಸಾಕ್ಷಾತ್ಕಾರವಾಗಬೇಕಾದರೆ, ಸಾಧನೆ ಮಾಡಬೇಕು. ಗುಹೇಶ್ವರ ಮುಗಿಲ ಮರೆಯಲಡಗಿದ ಮಿಂಚಿನಂತೆ. ಎರಡನೆಯ ಹಂತದಲ್ಲಿ ಇಲ್ಲಿಯ ಪ್ರತಿಮೆಗಳು ಮುಗಿಲು, ಮಿಂಚು ಎಂದು ಊರ್ಧ್ವಗಾಮಿಯಾಗಿ ನೆಗೆಯುತ್ತವೆ. ಮುಗಿಲ ಮರೆಯ ಮಿಂಚು, ತಾನೇ ತಾನಾಗಿ ಮಿಂಚಬೇಕು, ಬೆಳಕು ತೋರಬೇಕು. ಇದು ದೈವ ಕರುಣೆಯಾಗಬಹುದು, ಆಧ್ಯಾತ್ಮಿಕ ಅನುಭವದ ಹೊಳಹಾಗಬಹುದು. ಆದರೂ ಇದು ಪ್ರಖರ ಹಾಗೂ ಕ್ಷಣಿಕ ಕೂಡ. ನೆಲದ ನಿಧಾನದಂತೆ ಅಗೆದು ವಶಪಡಿಸಿಕೊಳ್ಳಲಾಗುವುದಿಲ್ಲ. ನಮ್ಮ ಕೈ ಮೀರಿದ್ದು ಎಂದೂ ಅರ್ಥೈಸಬಹುದು. 'ಬಯಲ ಮರೆಯಲಡಗಿದ ಮರೀಚಿಯಂತೆ', ನೆಲದಲ್ಲಿನ ಸಂಪತ್ತು ಸಿಗಬಹುದು, ಸಿಗದಿರಬಹುದು, ಮುಗಿಲ ಮರೆಯ ಮಿಂಚು ಹೊಳೆಯಬಹುದು, ಹೊಳೆಯದಿರಲೂಬಹುದು. ಬಯಲ ಮರೆಯ ಮರೀಚಿಕೆ ಅರೆ ಕ್ಷಣ ಕಂಡು ಮರುಕ್ಷಣ ಮಾಯವಾಗುವಂತಹದು, ಅಸ್ತಿತ್ವವೇ ಇರದಂತಹುದು. ಇವುಗಳನ್ನು ಹೇಗೆ ಗುಹೇಶ್ವರನ ಅರಿವಾಗಿಸಿಕೊಳ್ಳುವುದು ? ನೆಲದ ಮರೆಯಲ್ಲಿರುವ ಅದ್ಭುತ ಸಂಪತ್ತನ್ನು, ಸಂಶಯ ಕತ್ತಲುಗಳೆಂಬ ಮುಗಿಲಿನ ಹಿಂದೆ ಅಡಗಿ ಆಗಾಗ ಹೊಳೆಯುವ ಬೆಳಕನ್ನು (ಮಿಂಚನ್ನು) ಬಯಲ ಮರೆಯ ಮರೀಚಿಕೆಯಾಗಿ ಕಾಡುವುದನ್ನು "ಕಂಗಳ ಮರೆಯಲಡಗಿಹ ಬೆಳಕಾಗಿ ಮಾಡಿಕೊಂಡಾಗ" ಗುಹೇಶ್ವರನ ನಿಲುವು ಅರಿವಾಗುತ್ತದೆ. ನೆಲ, ಮುಗಿಲು,ಬಯಲು ಮುಂತಾದ ಅತ್ಯಂತ ವಿಶಾಲವಾದ ಹೊರಗಿನ ವಸ್ತುಗಳನ್ನು ಸೂಚಿಸುವ ಪ್ರತಿಮೆಗಳಿಂದ ಥಟ್ಟನೇ ಅತ್ಯಂತ ಪುಟ್ಟದಾದ ಕಂಗಳ ಪ್ರತಿಮೆಯಾಗಿ, ಕಂಗಳ ಮರೆಯಲಡಗಿಹ ಬೆಳಕಾಗಿ ಬಿಡುವ ಅಚ್ಚರಿಯನ್ನು ಕಾಣುತ್ತೇವೆ. ಇದು ವ್ಯಕ್ತಿಯ ಒಳಗೇ ಅವನ ಅಂತರಂಗದಲ್ಲಿ ಅಡಗಿರುವಂತಹ ಆರದಿರುವ ಬೆಳಕು, ಭೂಮಿ, ವ್ಯೋಮ, ಬಯಲುಗಳ ಅಗಾಧವಾದ ಪ್ರತಿಮೆಗಳಿಗಿಂತಲೂ, ಗಾತ್ರದಲ್ಲಿ ಅತಿ ಚಿಕ್ಕದಾದ, ಅತ್ಯಂತ ಸಮರ್ಥವಾದ ಕಣ್ಣುಗಳ ಪ್ರತಿಮೆ ತಾನೇ ತಾನಾಗಿ ವಿರಾಜಿಸುತ್ತದೆ.

ನೆಲದೊಳಗಿನ ನಿಧಾನ, ನೆಲದೊಳಗಿನ ಕತ್ತಲು ಜಡ, ಮಿಂಚು ಹೊಳೆದರೂ ಕ್ಷಣಿಕ, ಮರೀಚಿಕೆ ಭ್ರಾದುಕ, ಅಸ್ತಿತ್ವವೇ ಇಲ್ಲದ್ದು ಆದರೆ ಕಣ್ಣ ಹಿಂದಿರುವ ಬೆಳಕು ನಿರಂತರವಾದ ಜೀವ ಜ್ಯೋತಿ, ಜ್ಞಾನ ಜ್ಯೋತಿ, ಆತ್ಮದ ಬೆಳಕು. ಇಲ್ಲಿಯೇ ಗುಹೇಶ್ವರನ ನಿಲುವು, ಜೀವಸಂಪರ್ಕ ಆ ಗುಹೇಶ್ವರ ಅಗಾಧವಾದ ನೈಸರ್ಗಿಕ ಶಕ್ತಿಗಳಲ್ಲಿ ಮಾತ್ರವಲ್ಲ ಜೀವಿಗಳ ಅಂಗಗಳ, ಕಂಗಳ ಮರೆಯ ಬೆಳಕಾಗಿದ್ದು ಜೀವ ಜಗತ್ತಿನಲ್ಲಿಯೂ ಇರುವ ಅವನ ಅಸ್ತಿತ್ವವನ್ನು ಸಾರುತ್ತದೆ ಈ ವಚನ. ಸಣ್ಣದೊಂದು ವಚನದಲ್ಲಿ ಬೆಟ್ಟದಷ್ಟು ಅರ್ಥವನ್ನು ತುಂಬುವುದು ಅಲ್ಲಮನಿಗೆ ಮಾತ್ರವೇ ಸಾಧ್ಯ. ನಮ್ಮ ಕಂಗಳ ಹಿಂದಿನ ಬೆಳಕೇ ಗುಹೇಶ್ವರನೆಂಬ ಕಲ್ಪನೆ ಯಾರಿಗೆ ತಾನೇ ಹಿತವಾಗುವುದಿಲ್ಲ?

ತಮ್ಮ ತಮ್ಮ ಕಾಮನೆಗಳನ್ನು ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುವುದರಲ್ಲಿಯೇ ನಿರತರಾಗಿರುವವರನ್ನು ಟೀಕಿಸುತ್ತಾ ಅಲ್ಲಮ ಹೇಳುತ್ತಾನೆ "ಆಸೆಗೆ ಸತ್ತುದು ಕೋಟಿ। ಆಮಿಷಕ್ಕೆ ಸತ್ತುದು ಕೋಟಿ। ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ। ಗುಹೇಶ್ವರಾ ನಿಮಗಾಗಿ ಸತ್ತವರಾರನೂ ಕಾಣೆ।". ಹೌದು, ದೇವರಿಗಾಗಿ ಯಾರು ಸಾಯುತ್ತಾರೆ? ದೇವರಿಗಾಗಿ ದೇವರನ್ನು ಯಾರು ಬಯಸುತ್ತಾರೆ? ಸಾಧಕರು ಕೂಡ ತಮ್ಮ ಸಿದ್ಧಿಗಾಗಿ ದೇವರನ್ನು ಮೊರೆ ಹೋಗುತ್ತಾರೆ. ಸಾಯುವವರು ಎಂದರೆ, ಇಲ್ಲಿ ತಮ್ಮ ಆಸೆ, ಆಕಾಂಕ್ಷೆಗಳ ಈಡೇರಿಕೆಗಾಗಿ ತಮ್ಮತನವನ್ನು ಕಳೆದುಕೊಳ್ಳುವವರು ಎಂದು ಅರ್ಥ ಮಾಡಿಕೊಳ್ಳಬಹುದು. ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಗುಹೇಶ್ವರನನ್ನು ಪ್ರಾರ್ಥಿಸುವವರು ಎಂದೂ ಹೇಳಬಹುದು. ಇಂತಹ ಲೌಕಿಕ ಸೌಲಭ್ಯ, ಸಂಪತ್ತಿಗಾಗಿ ಗುಹೇಶ್ವರನನ್ನು ಪ್ರಾರ್ಥಿಸುವ ಇಂತಹವರು ಕೋಟಿ ಕೋಟಿ. ಆದರೆ, ದೇವರಿಗಾಗಿ, ಸಾಯಲು ಯಾರು ಸಿದ್ಧರಿರುತ್ತಾರೆ? ಗುಹೇಶ್ವರನಿಗಾಗಿ ಸತ್ತವರು ಯಾರನೂ ಕಾಣೆ ಎಂದಾಗ ಸತ್ತವರು ಎಂಬ ಪದದ ಅರ್ಥವೇ ಉನ್ನತೀಕರಿಸಲ್ಪಡುತ್ತದೆ. ಮಾಗಿದ ಸಾಧಕನಿಗೂ, ಸಾಮಾನ್ಯನಿಗೂ ಇರುವ ಅಂತರವನ್ನು ಅಲ್ಲಮ ಹೀಗೆ ನಿರೂಪಿಸಿದ್ದಾನೆ.

ಭಕ್ತಿಯ ಹೆಸರಿನಲ್ಲಿ ಅತಿಯಾದ ನೇಮಗಳನ್ನುಚರಿಸುವವನನ್ನು ಅಲ್ಲಮ ಹೀಗೆ ಗೇಲಿ ಮಾಡುತ್ತಾನೆ. "ಹಾಲನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ । ಕಡಲೆಯ ನೇಮದ ಹಿಡಿದಾತ ಕುದುರೆಯಾಗಿ ಹುಟ್ಟುವ । ಅಡ್ಡಿವಣಿಯ ನೇಮದ ಹಿಡಿದಾತ ಕಪ್ಪೆಯಾಗಿ ಹುಟ್ಟುವ । ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ। ಇವು ಕೂಡುಸ್ಥಲಕ್ಕೆ ಹೊರಗು। ನಿಜ ಭಕ್ತಿ ಇಲ್ಲದವನ ಕಂಡಡೆ ಮೆಚ್ಚನು ಗುಹೇಶ್ವರನು"। (ವ.ಸಂ. ೨೦). ಭಕ್ತಿಯು ಹೃದಯದಲ್ಲಿ ತಂತಾನೆ ಅರಳಬೇಕಾದ ಸುಮಧುರ ಸುಗಂಧದ ಮಂದಾರ ಪುಷ್ಪ ಹಾಗಾಗಿ ಅಲ್ಲಮನ ಪ್ರಕಾರ "ಘನತರವಾದ ಚಿತ್ರದ

ರೂಪ ಬರೆಯಬಹುದಲ್ಲದೆ ಪ್ರಾಣವಬರೆಯಬಹುದೆ ಅಯ್ಯಾ? ದಿವ್ಯಾಗಮಂಗಳು ಹೇಳಿದ ಕ್ರಿಯೆಯಲ್ಲಿ ದೀಕ್ಷೆಯ ಮಾಡಬಹುದಲ್ಲದೆ ಭಕ್ತಿಯ ಮಾಡಬಹುದೆ ಅಯ್ಯಾ। ಪ್ರಾಣದಹ ಭಕ್ತಿಯ ತನ್ಮಯ ನೀನು । ಈ ಗುಣದಲ್ಲಿ ನೀನಿಹೆ ಇಲ್ಲದಲ್ಲಿ ನೀನಿಲ್ಲ ಗುಹೇಶ್ವರಾ''। (ವ.ಸು. ೭೯). ಭಕ್ತಿಯ ತೋರಿಕೆಯ ಬಾಹ್ಯ ಸಾಧನಗಳೆಲ್ಲಾ ಕೇವಲ ಚಿತ್ರದ ರೂಪಿನಂತೆ. ಅದರ ಪ್ರಾಣವೇ ಭಕ್ತಿ. ಗುಹೇಶ್ವರ ತನ್ಮಯನಾಗುವುದು ಭಕ್ತಿಯಲ್ಲಿಯೇ ಹೊರತು ಭಕ್ತಿಯೆಂದು ತೋರುವ ನಿರ್ಜೀವ ಸಾಧನಗಳಲಿಲ್ಲ. ವಿಭೂತಿ, ಕಾವಿ, ರುದ್ರಾಕ್ಷಿಗಳು ವೈರಾಗ್ಯದ ಲಾಂಛನಗಳಾಗುವುದರ ಬದಲು, ಆಷಾಢ ಭೂತಿತನದ ಕುರುಹಾಗುವುದನ್ನು ಹಲವಾರು ವಚನಗಳ ಮೂಲಕ ಅಲ್ಲಮ ಅಭಿವ್ಯಕ್ತಿಸಿದ್ದಾನೆ. ಇಂತಹ ಸೋಗಿನ ಭಕ್ತರು ಕಂಡಾಗ, ಅಲ್ಲಮನ ಎಲ್ಲ ಕಾಲದ ಎಲ್ಲ ದೇಶದ ಸಮಾಜಗಳ ಅವಿಭಾಜ್ಯ ಅಂಗಗಳಾಗಿರುತ್ತಾರೆಂಬುದು ತಿಳಿಯುತ್ತದೆ. ''ವರವೇಷದ ವಿಭೂತಿ ರುದ್ರಾಕ್ಷಿಯ ಧರಿಸಿಕೊಂಡು । ವೇದಶಾಸ್ತ್ರ ಪುರಾಣಾಗಮದ ಬಹುಪಾಠಿಗಳು । ಅನ್ನ ಹೊನ್ನು ವಸ್ತ್ರವ ಕೊಡುವವನ ಬಾಗಿಲ ಕಾಯ್ದು ಮಣ್ಣಪುತ್ಥಳಿಯಂತೆ ಅನಿತ್ಯ ನೇಮದ ಹಿರಿಯರುಗಳು....''ಎನ್ನುವ ಅಲ್ಲಮ ತಾವು ಗಳಿಸಿದ ಜ್ಞಾನಕ್ಕೆ ತಕ್ಕಂತೆ ವರ್ತಿಸದೆ, ಲಾಭಕ್ಕಾಗಿ, ಸುಖಕ್ಕಾಗಿ, ಬೇರೆಯವರೆದುರಿಗೆ ತಲೆಬಾಗಿ ಕಾಯುವುದನ್ನು ವಿಡಂಬಿಸುತ್ತಾನೆ.

''ಉಲುಹಿನ ವೃಕ್ಷದ ನೆಳಲಡಿಯಲ್ಲಿದ್ದು । ಗಲಭೆಯನೊಲ್ಲೆ ನೆಂಬುದೆಂತಯ್ಯಾ''? ಎಂದು ಪ್ರಶ್ನಿಸುತ್ತಾನೆ. ಅಲ್ಲಮ. 'ಉಲುಹಿನ ವೃಕ್ಷ' ಎಂಬ ಪ್ರತಿಮೆಯೇ ಒಂದು ಅದ್ಭುತವನ್ನು ಸೃಷ್ಟಿಸುತ್ತದೆ. ''ಮಾತಾಡುವ ಮರ''ದ ಕಲ್ಪನೆ ನಮ್ಮನ್ನು ಅದ್ಭುತದ ಯಕ್ಷಿಣೀ ಲೋಕಕ್ಕೆ ಕರೆದೊಯ್ದು ಮತ್ತೆ ನಮ್ಮ ಈ ಲೋಕಕ್ಕೇ ಕರೆತಂದು ಬಿಡುತ್ತದೆ. ಉಲುಹು ಎಂದರೆ ಮಾತು ಶಬ್ದ. ಶಬ್ದ ಎಂದರೆ ಸೃಷ್ಟಿ ಕೂಡ. ಉಲುಹಿನ ವೃಕ್ಷವೆಂದರೆ ಸೃಷ್ಟಿಯ ವೃಕ್ಷ, ಅದು ಈ ನಮ್ಮ ಲೋಕ, ಜೀವನದ ವೃಕ್ಷ ಕೂಡ. ಇದರ ನೆರಳಲ್ಲಿದ್ದು ಎಲೆಗಳ, ರೆಂಬೆಕೊಂಬೆಗಳ, ಅದರಲ್ಲಿರುವ ಹಕ್ಕಿಪಕ್ಷಿಗಳ ಮರ್ಮರದ ಶಬ್ದ, ಗಲಭೆ ಬೇಡವೆಂದರಾಗುತ್ತದೆಯೇ? ಈ ವೃಕ್ಷದಡಿಯಲ್ಲಿರುವವರೆಗೂ, ಗಲಭೆ, ಗದ್ದಲ, ಪಂಚೇಂದ್ರಿಯ ಪ್ರಪಂಚದ ಕಾಮನೆ, ಕರಣಗಣಗಳ ರಿಂಗಣ ನಡೆಯುತ್ತಲೇ ಇರುತ್ತದೆ. ಅವಿರತ ಪ್ರಯತ್ನದಿಂದ ಇದನ್ನು ಮೀರಿ ನಿಲ್ಲಬಹುದೇನೋ.

ಅವಧೂತನಂತೆ, ಲೋಕಸಂಚಾರಿಯಾಗಿದ್ದ ಅಲ್ಲಮನ ನಿಕಷಕ್ಕೆ ಸಿಕ್ಕವರು, ಶ್ರೀ ಸಾಮಾನ್ಯನಿಂದ ಮೊದಲುಗೊಂಡು, ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಚನ್ನಬಸವಣ್ಣ, ಮುಕ್ತಾಯಕ್ಕೆ, ಗೋರಕ್ಷ ಮುಂತಾದ ಅನೇಕ ಶರಣ, ಶರಣೆಯರು, ಹಠಯೋಗಿಗಳು ಮುಂತಾದ ಅನೇಕರು. ಸಿದ್ಧರಾಮನು ಲೋಕಹಿತಕ್ಕಾಗಿ

ಕಟ್ಟಿಸುತ್ತಿದ್ದುದನ್ನು ಟೀಕಿಸಲು, ಕರೆ ಕಟ್ಟುತ್ತಿದ್ದ ಒಡ್ಡರನ್ನು ''ಎಲ್ಲಿಹನು ನಿಮ್ಮ ಒಡ್ಡರಾಮ'' ಎಂದು ಕೇಳುತ್ತಾನೆ. ಅಲ್ಲಮನ ಈ ಮಾತುಗಳು ಕರ್ಮಯೋಗಿ ಸಿದ್ದರಾಮನನ್ನು ಕೆರಳಿಸಿತು. ಹೊರಗೆ ಕೆರೆ ಕಟ್ಟುವಷ್ಟೇ ಅದಕ್ಕಿಂತಲೂ ಅಗತ್ಯವಾದದ್ದು ಒಳಗೆ ಕೆರೆಕಟ್ಟುವುದು ಎನ್ನುವುದನ್ನು ಅಲ್ಲಮ ಈ ವಚನದಲ್ಲಿ ತಿಳಿಸಿದ್ದಾನೆ.

''ತನುವೆಂಬ ಏರಿಗೆ ಮನವೆಂಬ ಕಟ್ಟೆಯ ಮಾಡಿ

ಒಲಿದು ಷಡ್ವಿಧ ಭಕ್ತಿಯೆಂಬ ಸೋಪಾನದಿಂದ

ಪರಮಾನಂದ ವೆಂಬ ಜಲವ ತುಂಬಿ

ಕೆರೆಯ ಕಟ್ಟಬಲ್ಲವರಾರನೂ ಕಾಣೆ।

ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರ, ನಿಮ್ಮಾಣೆ.''

ಭಕ್ತಿ ಭಂಡಾರಿ ಬಸವಣ್ಣನಿಗೆ ಸ್ಥಾವರಕ್ಕಿಂತ ಜಂಗಮ ಮೇಲು ಎಂಬುದನ್ನು ಮನಗಾಣಿಸುತ್ತಾನೆ. ಅನುಭವ ಮಂಟಪದಲ್ಲಿ ಅಕ್ಕನ ಪರೀಕ್ಷೆ ನಡೆಯುತ್ತದೆ. ಗೋರಕ್ಷನ ಪ್ರಸಂಗದಂತೂ ಅತ್ಯಂತ ರೋಚಕವಾಗಿದೆ. ಗೋರಕ್ಷ ಹಠಯೋಗಿ ವಜ್ರಕಾಯನಾಗಿದ್ದವನು. ಕಾಪಾಲಮಾರ್ಗಿ. ತನ್ನ ದೇಹವನ್ನು ನಾಶಪಡಿಸುವುದೇ ಸಾಧ್ಯವಿಲ್ಲವೆಂದಾತ ತನ್ನನ್ನು ಕತ್ತಿಯಿಂದ ಹೊಡೆದು ನೋಡುವಂತೆ ಒತ್ತಾಯ ಮಾಡಿದಾಗ, ಕತ್ತಿ ಖಣಿಲ್‌ಖಣಿಗೆಲ್ ಎಂದು ಶಬ್ದ ಮಾಡಿತೇ ವಿನಃ ಗೋರಕ್ಷನ ದೇಹದೊಳಕ್ಕೆ ಪ್ರವೇಶಿಸುವುದೇ ಇಲ್ಲ. ಅದೇ ಗೋರಕ್ಷ, ಅಲ್ಲಮನ ಅಪ್ಪಣೆಯಂತೆ, ಕತ್ತಿಯನ್ನು ಅಲ್ಲಮನ ಶರೀರಕ್ಕೆ ತಿವಿದಾಗ, ಅದು ಬಯಲಲ್ಲಿ ಆಡಿದಂತೆ ಈ ಸಾಡಿತಂತೆ. ಆಗ ಗೋರಕ್ಷ ಅಲ್ಲಮನನ್ನು ತನ್ನ ಗುರುವೆಂದು ಒಪ್ಪುತ್ತಾನೆ. ಇಂತಹ ಅಲ್ಲಮನೇ ಶೂನ್ಯಸಿಂಹಾಸನಕ್ಕೆ ಅಧಿಪತಿಯಾದದ್ದು.

ವೇದಾಗಮ, ಅದ್ವಯತತ್ವ, ಶೂನ್ಯವಾದ, ವೀರಶೈವ ಸಿದ್ಧಾಂತ ಎಲ್ಲವೂ ಅಲ್ಲಮನ ಗುಹೇಶ್ವರನಿಗೆ ಪ್ರಿಯವೇ. ಲಿಂಗಾರ್ಚನೆಯೂ ಪ್ರಿಯ ಮಾನಸ ಪೂಜೆಯೂ ಪ್ರಿಯ. ಜಂಗಮ ಎಂಬುದಕ್ಕೆ ಅನ್ವರ್ಥವಾಗಿದ್ದಂತಹ ಅವನ ಜೀವನ ಕ್ರಮ, ಚಲನಶೀಲತೆ, ಅಪ್ರತಿಮ ಬೌದ್ಧಿಕ ಪ್ರಖರತೆಗಳಿಂದಾಗಿ ಅವನ ವಚನಗಳಲ್ಲಿ ಬೇರೆ ವಚನ ಕಾರರಲ್ಲಿ ಕಂಡು ಬರದ ಮೊನಚು ತೀಕ್ಷ್ಣತೆಗಳು ಕಂಡುಬರುತ್ತವೆ.

ಅವನ ಅನೇಕ ವಚನಗಳು ನೇರವಾಗಿ ಶ್ರೀ ಸಾಮಾನ್ಯನನ್ನೇ ಉದ್ದೇಶಿಸಿದಂತಿವೆ. ಪಾರಮಾರ್ಥಿಕ ಜೀವನದಂತೆಯೇ, ಲೌಕಿಕ ಜೀವನದ ಯಶಸ್ಸಿನ ರಹಸ್ಯವನ್ನು ತಿಳಿಸುವ, ಬಹುವಾಗಿ ಉದ್ಧರಿಸಲ್ಪಡುವ ವಚನವಿದು.

"ಕೊಟ್ಟ ಕುದುರೆಯ ನೇರಲರಿಯದೆ
ಮತ್ತೊಂದು ಕುದುರೆಯ ನೇರಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ ಅದು ಕಾರಣ
ನೆರೆ ಮೂರು ಲೋಕವೆಲ್ಲವೂ ಹಲ್ಲಣವ ಹೊತ್ತುಕೊಂಡು
ತೊಳಲುತ್ತ ಇದ್ದಾರೆ
ಗುಹೇಶ್ವರನೆಂಬ ಲಿಂಗವನವರೆತ್ತಬಲ್ಲರು?" (ವ.ಸು. ೧೨೭)

ಈ ವಚನದ ಮೊದಲೆರಡು ಸಾಲುಗಳಲ್ಲಿ ಈ ಲೋಕದ ಮನುಜರ ಸ್ವಭಾವ ಮನೋಧರ್ಮಗಳ ಪರಿಚಯವಾಗುತ್ತದೆ. ಪ್ರತಿಯೊಬ್ಬನಿಗೂ ತಾನಿರು ಪರಿಸ್ಥಿತಿಗಿಂತ ಬೇರೆಯೇ ಆದ ಪರಿಸ್ಥಿತಿ, ಸನ್ನಿವೇಶಗಳಲ್ಲಿದ್ದಿದ್ದರೆ, ಏನೋ ಅದ್ಭುತವೊಂದನ್ನು ಸಾಧಿಸಿಬಿಡುತ್ತಿದ್ದೆನೆಂಬ ಭ್ರಮೆ ಇರುತ್ತದೆ. ಆಗ ತಾನು ಬದುಕನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಬಹುದಾಗಿತ್ತು ಎನ್ನುವ ಅನಿಸಿಕೆಯೂ ಇರುತ್ತದೆ. ಆದರೆ ಈಗಿರುವ ಬದುಕಿನಲ್ಲಿಯೇ ಏನನ್ನಾದರೂ ಸಾಧಿಸಬಲ್ಲನೆಂಬ ಭರವಸೆಯಾಗಲೀ, ಸಾಧಿಸಬೇಕೆಂಬ ಛಲವಾಗಲೀ ಇರದೆ, ಬದುಕೆಂಬ ಕುದುರೆಯನ್ನು ಬದಲಾಯಿಸಿಕೊಳ್ಳಬೇಕೆಂದು ಆಶಿಸುವ ಮಂದಿಯೇ ಹೆಚ್ಚು. ಆದರೆ ಈ ನಮ್ಮ ನಮ್ಮ ಬದುಕು, ನಮಗಾಗಿ ಎಂದೇ ನಿಗದಿಪಡಿಸಿ "ಕೊಟ್ಟ"ರುವ ಕುದುರೆ. ಅದು ನಮ್ಮ ಪಾಲಿಗೆ ಬಂದು ನಮ್ಮನ್ನು ಅಂಟಿಕೊಂಡು ಬಿಟ್ಟಿರುವ ಕುದುರೆಯಂತೆ. ಹಾಗಾಗಿ ನಮಗಿರುವುದು ಎರಡೇ ದಾರಿ. ಕೊಟ್ಟ ಕುದುರೆಯನ್ನು ಪಳಗಿಸಿ, ಹಿಡಿತದಲ್ಲಿಟ್ಟುಕೊಂಡು ಸವಾರಿಮಾಡಬೇಕು. ಅಥವಾ ಕುದುರೆ ನಮ್ಮನ್ನೇ ಏರಿ ಸವಾರಿ ಮಾಡಲು ಅವಕಾಶ ಮಾಡಿಕೊಡಬೇಕು. ಕುದುರೆ ಬದುಕಿನ ಪ್ರತಿಮೆಯಾಗುತ್ತದೆ ಈ ವಚನದಲ್ಲಿ. ಜೀವನದಲ್ಲಿ ಯಶಸ್ಸು ಸಾಧಿಸಬೇಕಾದರೆ ನಮ್ಮ ಪಾಲಿಗೆ ಬಂದಿರುವ ಕುದುರೆಯನ್ನು ಅಂದರೆ ಬದುಕನ್ನು ಲಗಾಮು ಹಿಡಿದು ಪಳಗಿಸಿ, ಒಗ್ಗಿಸಿಕೊಂಡು ಅದನ್ನೇರಬೇಕು. ಇರುವ ಕುದುರೆಯನ್ನೇ ಪಳಗಿಸಿ ಏರಲರಿಯದವನು ಮತ್ತೊಂದನ್ನು ಏರಬಲ್ಲನೆಂಬುವುದಕ್ಕೆ ಖಾತರಿಯೇನು ? ಅಲ್ಲದೆ ಬದುಕು, ಮತ್ತೊಬ್ಬರ ಬದುಕಿಗೆ ಬದಲಾಯಿಸಿ ಕೊಳ್ಳುವುದಕ್ಕೆ ಅದೇನು ಒಂದು ವಸ್ತುವೇ, ನಿಜವಾಗಿ ಕುದುರೆಯೇ? ಕುದುರೆ ಬದುಕಿನ ಸಂಕೇತವಾದಂತೆಯೇ, ಅಧಿಕಾರದ ಸಂಕೇತ ಕೂಡ. ಅಶ್ವಶಕ್ತಿಯೆಂದರೆ ವಿದ್ಯುತ್ತಿನ ಶಕ್ತಿಯನ್ನು ಅಳೆಯುವ ಕ್ರಮ ಕೂಡ. ಕೊಟ್ಟ ಅಧಿಕಾರವನ್ನು ಶಕ್ತಿ, ಯುಕ್ತಿ ವಿವೇಚನೆಯಿಂದ ಉಪಯೋಗಿಸಿಕೊಳ್ಳಲಾರದವ ವೀರನಾಗಲು, ಧೀರನಾಗಲು ಹೇಗೆ ಸಾಧ್ಯ? ತನಗೆ ದಕ್ಕಿದ ಅಧಿಕಾರವನ್ನು

ಸಮರ್ಥವಾಗಿ ಉಪಯೋಗಿಸಿಕೊಂಡಾಗ ಮಾತ್ರ ಬದುಕು ಎಂಬ ಕುದುರೆಯನ್ನೇರಿ, ಯಶಸ್ಸಿನ ಪಥದಲ್ಲಿ ಸಾಗಬಹುದು. ಹಾಗಾಗದಿದ್ದಾಗ ಕುದುರೆಯನ್ನು ಬದಲಾಯಿಸಿಕೊಳ್ಳಲಿಚ್ಛಿಸಿ, ಬದುಕನ್ನು ದೂಷಿಸುತ್ತಾ ದುಃಖಿಸುತ್ತಾನೆ. ಹಾಗಾಗಿ ಅಲ್ಲಮ ಹೇಳುವ ''ಹಲ್ಲಣವ ಹೊತ್ತುಕೊಂಡು ತೊಳಲುತ್ತ ಇರುವ ಸ್ಥಿತಿ ಅನಿವಾರ್ಯವಾಗುತ್ತದೆ. ಅವರವರ ಕುದುರೆಯನ್ನವರೇ ಏರಬೇಕು, ಅವರವರ ಶಿಲುಬೆಯನ್ನವರೇ ಹೊರಬೇಕು. ''ಸ್ವಾಮಿ ವಿವೇಕಾನಂದರು'' ಎನ್ನುವ ಕವನವೊಂದರಲ್ಲಿ ಇದೇ ಅಭಿಪ್ರಾಯ ವ್ಯಕ್ತವಾಗಿದೆ. ಬಟ್ಟಲು ಜೀವನದ, ಸಂಕೇತವಾಗುತ್ತದೆ. ಬಟ್ಟಲು ನಮಗೆ ದತ್ತವಾಗಿದೆ ಕೊಡಲ್ಪಟ್ಟಿದೆ. ಅದರಲ್ಲಿರುವ ಪಾನೀಯ ಸಿಹಿಯಾಗಿರಲಿ, ಹಂಚಿಕೊಳ್ಳಲಾಗಲೀ, ಬಟ್ಟಲನ್ನು ಬೇರೆಯವರ ಬಟ್ಟಲಿನೊಡನೆ ಬದಲಾಯಿಸಿಕೊಳ್ಳುವುದಾಗಲೀ ಸಾಧ್ಯವಿಲ್ಲ. ತಮಗೆ ನಿಗದಿಸಲ್ಪಟ್ಟಿರುವುದನ್ನು ಸರಿಯಾಗಿ ದಕ್ಕಿಸಿಕೊಳ್ಳದೇ, ಇಲ್ಲದಿರುವುದನ್ನು ಚಿಂತಿಸಿ, ಬಯಸಿ, ಹೈರಾಣಾಗಿ ''ಹಲ್ಲಣವ ಹೊತ್ತು'' ತಿರುಗುವ ಲೋಕದ ಜನರ ಸ್ವಭಾವವನ್ನು ಅಲ್ಲಮ ಹಿಡಿದಿಟ್ಟಿದ್ದಾನೆ. ಲೋಕದ ಜನರ ಸ್ವಭಾವ ಹೀಗೆ ಎಂದು ಬೆಳಕು ಚೆಲ್ಲುವನಲ್ಲದೇ, ನೀವು ಹೀಗೇ ಇರಬೇಕು ಎಂದು ನಿರ್ದೇಶಿಸದಿರುವುದು ಅಲ್ಲಮನ ಮತ್ತೊಂದು ವೈಶಿಷ್ಟ್ಯ.

ಮತ್ತೊಂದು ವಚನ ಕೂಡ ಹೀಗೆಯೇ ಮಾನವನ ಸ್ವಭಾವದ ಮೇಲೆ ಬೆಳಕು ಚೆಲ್ಲುತ್ತಲೇ ಗುರುವಿನ ಮೂಲಕ ಗುಹೇಶ್ವರನನ್ನು ಕಾಣುವ ಪರಿಯನ್ನು ವಿವರಿಸುತ್ತದೆ.

''ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿದಿಹೆನೆಂದಡೆ
ಸಿಕ್ಕದೆಂಬ ಬಳಲಿಕೆಯ ನೋಡ.
ಕಂಡುದನೆ ಕಂಡು ಗುರುಪಾದವಿಡಿದಲ್ಲಿ
ಕಾಣಬಾರದುದ ಕಾಣಬಹುದು ಗುಹೇಶ್ವರಾ''

ಈ ವಚನದ ಮೊದಲೆರಡು ಸಾಲುಗಳು ಗೋಪಾಲಕೃಷ್ಣ ಅಡಿಗರ '' ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ'' ಎಂಬ ಸಾಲುಗಳನ್ನು ನೆನಪಿಸುತ್ತವೆ. ಕಂಡುದನ್ನು ಹಿಡಿಯುವುದು, ಪಡೆಯುವುದು ಬೇಡ. ಇರುವುದು ಬೇಡ, ಇಲ್ಲದಿರುವುದು ಸಿಗುವುದಿಲ್ಲ, ಅರಸಿದರೂ ದೊರೆಯುವುದಿಲ್ಲ, ಅರಸಿದುದು ಸಿಗದಿದ್ದಾಗ, ನಿರಾಶೆಯ ಬಳಲಿಕೆ. ಕಾಣದುದನ್ನು - ಅಂದರೆ ಅಲ್ಲಮನ ಅರ್ಥದಲ್ಲಿ ಗುಹೇಶ್ವರನನ್ನು ಸಾಕ್ಷಾತ್ಕರಿಸಿಕೊಳ್ಳಲು, ಈ ಬದುಕಿನ ಮೂಲಕ ಅಂದರೆ 'ಕಂಡದನ್ನು' ಅರ್ಥ ಮಾಡಿಕೊಂಡು (ಕಂಡು), ಅನುಭವಿಸಿ, ಗುರುಪಾದ ಹಿಡಿದರೆ

ಕಾಣಲಾರದುದನ್ನು ಕಾಣಬಹುದು. ವ್ಯಕ್ತದ ಮೂಲಕ, ಅವ್ಯಕ್ತವನ್ನು ಸಾಧಿಸುವ ಕ್ರಮವನ್ನು ಇಲ್ಲಿ ಸರಳವಾಗಿ ಹೇಳುತ್ತಾನೆ. ಗುರುಪಾದವೆಂಬುದು, ವ್ಯಕ್ತದಿಂದ, ಅವ್ಯಕ್ತಕ್ಕೆ ತಲುಪಿಸಲು, ಅವಶ್ಯಕವಾದ ಟಿಕೇಟ್ ಇದ್ದಂತೆ. ಕಾಣಬಾರದ ಘನವನ್ನು ಕಾಣಲು ರಹದಾರಿಯಂತೆ. ಈ ಭವಸಾಗರದಲ್ಲಿರುವ ಮನುಷ್ಯರ ಪರಿಸ್ಥಿತಿಯನ್ನು ಅಲ್ಲಮ ಹೀಗೆ ಹೇಳುತ್ತಾನೆ. ಈ ವಚನದಲ್ಲಿ.

''ಸಾಗರದೊಳಿಪ್ಪ ಪ್ರಾಣಗಳು । ಬೇರೆ ಮತ್ತೊಂದೆಡೆಯಲ್ಲಿ ಇರಬಲ್ಲವೆ? ಭವಸಾಗರದೊಳಿಪ್ಪ ಜೀವಿಗಳಿಗೆ ಅದೇ ಗತಿಯಲ್ಲದೆ । ಮತ್ತೆ ಬೇರೊಂದು ಎಡೆಯುಂಟೆ?। ಗುಹೇಶ್ವರನ ಲೀಲೆ ಜಗನ್ಮಯವಾದೊಡೆ ನಾನು ಬೆರಗಾದೆನು''। ನಮಗೂ ಈ ಭವಸಾಗರಕ್ಕೂ ಇರುವ ನಂಟು ನೀರಿಗೂ ಮೀನಿಗೂ - ಜಲಚರಗಳಿಗೂ ಇರುವ ನಂಟು. ನೀರಿನಾಚೆ ಮೀನಿಗೆ ಜೀವನವಿಲ್ಲ, ಈ ಭವಸಾಗರ ಬಿಟ್ಟು ನಮಗೆ ಬದುಕಿಲ್ಲ ಎಂಬ ಸತ್ಯವನ್ನು ಈ ವಚನದ ಮೂಲಕ ಮನಗಾಣಿಸುತ್ತಾನೆ.

ಅಲ್ಲಮನ ಈ ಪ್ರಸಿದ್ಧ ವಚನ ಈ ಪ್ರಪಂಚದ ಎಲ್ಲ ವಸ್ತುಗಳಲ್ಲಿ ಇರುವ ಅಂತಃಸಂಬಂಧಗಳ ಬಗೆಗೆ ವಿಶ್ಲೇಷಿಸಿರುವ ರೀತಿ ಅಚ್ಚರಿಯುಂಟು ಮಾಡುತ್ತದೆ.

''ಎತ್ತಣ ಮಾಮರ ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯಾ
ಬೆಟ್ಟದ ಮೇಲಣ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ
ಗುಹೇಶ್ವರ ಲಿಂಗಕ್ಕೆಯೂ ನಮಗೆಯೂ ಎತ್ತಣಿಂದೆತ್ತ ಸಂಬಧವಯ್ಯಾ''

ಮಾಮರ ಸಸ್ಯವರ್ಗಕ್ಕೆ ಸೇರಿಮದು. ಕೋಗಿಲೆ ಖಗಚರಿ, ಇಂಪಾಗಿ ಹಾಡಬಲ್ಲದು. ಪರಸ್ಪರ ಯಾವುದೇ ರೀತಿಯ ಜಾತಿ ಬಾಂಧವ್ಯವಿರದಿದ್ದರೂ, ಯಾವು ಹೂ ಬಿಡುವಾಗ ಕೋಗಿಲೆ ಹಾಡುತ್ತದೆ ಇದಾದ ವಿಚಿತ್ರ ಸಂಬಂಧ? ಬೆಟ್ಟದ ನೆಲ್ಲಿ ಕಾಯಿ, ಸಮುದ್ರದ ಉಪ್ಪು ಒಂದಾಗಿ ರುಚಿಕಟ್ಟಾದ ವ್ಯಂಜನವಾಗುವುದು ಇದಾವ ರೀತಿಯ ಸಂಬಂಧ? ಪರಸ್ಪರ ಎಷ್ಟೋ ದೂರದಲ್ಲಿರುವ ವಸ್ತುಗಳು ಹೀಗೆ ಒಂದಾಗಿ ಸಾಂಗತ್ಯ ಸಾಧಿಸುವುದು ಪ್ರಕೃತಿಯಲ್ಲಿ ಕಂಡುಬರುವಾಗ, ಮನುಷ್ಯ ಜೀವನದಲ್ಲಿ ಹತ್ತಿರವಿದ್ದೂ ಪರಸ್ಪರ ದೂರಾಗುವ ಪ್ರಕ್ರಿಯೆ ಏಕೆ ಎಂಬ ಪ್ರಶ್ನೆ ಬರುತ್ತದೆ. ಗುಹೇಶ್ವರ ಲಿಂಗ ದೊಡನೆ, ಅಂತಹ ಮಹತ್ತಿನೊಡನೆ, ಜೀವ ಸಂಬಂಧ ಸ್ಥಾಪಿತವಾದಾಗ, ಇದೆಂಥ ಸಂಬಂಧವೆನ್ನುವ ಅಚ್ಚರಿ ಮೂಡುವುದಲ್ಲದೇ ಪ್ರಪಂಚದ ಎಲ್ಲ ವಸ್ತುಗಳ ನಡುವೆ ಅವ್ಯಕ್ತ

ಸೂತ್ರದಂತಿರುವ ಸಂಬಂಧದ ಅರಿವಾಗಿ, ಎಲ್ಲ ವಸ್ತುಗಳೂ ಒಂದರೊಡನೊಂದು ಹೊಂದಿಕೊಂಡು, ಸ್ಪಂದಿಸುವ, ಈ ವಿಶ್ವ ಒಂದು ಕುಟುಂಬವೆನಿಸುತ್ತದೆ.

ಗುರುವಾಗಬಲ್ಲವನು ಯಾರು ಎಂದು ಹೇಳುವ ಅಲ್ಲಮನ ಈ ವಚನದಲ್ಲಿ ಒಂದು ರೀತಿಯ ಅಸ್ತಿತ್ವವಾದಿ ಚಿಂತನದ ಹೊಳಹು ಕಂಡುಬರುತ್ತದೆ.

'ಸಾವ ಜೀವಕ್ಕೆ ಗುರುಬೇಡ। ಸಾಯದ ಜೀವಕ್ಕೆ ಗುರು ಬೇಡ। ಗುರುವಿಲ್ಲದೆ

ಕೊಡಲು ಬಾರದು। ಸಾವು ಜೀವ ಸಂಬಂಧದ ಠಾವ ತೋರುಬಲ್ಲಡೆ।

ಆತನೆ ಗುರು ಗುಹೇಶ್ವರಾ।

ಸಾವನ್ನು ಅರಿಯುವ ಬಯಕೆಯೇ ಜ್ಞಾನದ ಮೊದಲ ಮೆಟ್ಟಲೆನ್ನುತ್ತಾರೆ ಅಸ್ತಿತ್ವವಾದಿಗಳು. ಸಾವು ಜೀವಗಳ ಸಂಬಂಧದ ನಿಜವನ್ನು ತೋರಿಸುವವನೆ ಗುರು ಎನ್ನುತ್ತಾನೆ ಅಲ್ಲಮ. ಸಾವಿನ ಬೀಜ ಹೊತ್ತೇ ಹುಟ್ಟಿಬರುತ್ತದೆ ಜೀವ ಜೀವದ ಒಡಲಲ್ಲಿಯೇ ಸಾವಿನ ಬೀಜ ಬೆಳೆದು ಫಲಿಸುತ್ತದೆಂಬ ಪ್ರಗಾಢ ರಹಸ್ಯವನ್ನು ಮನಗಾಣಿಸುವವನೆ ಗುರು ಅದೇ ...ಪರಮಜ್ಞಾನ. ನಾವಿಲ್ಲಿ ಕಠೋಪನಿಷತ್ತಿನ ನಚಿಕೇತನನ್ನು ನೆನಪಿಸಿಕೊಳ್ಳಬಹುದು.

ಅಲ್ಲಮನ ವಚನಗಳಲ್ಲಿ ಕಾಲದ ಪರಿಕಲ್ಪನೆ ಅದ್ಭುತವಾಗಿ ಮೂಡಿ ಬಂದಿದೆ. ಸಾಮಾನ್ಯನ ತಿಳಿವಳಿಕೆಯ ಪ್ರಕಾರ ಕೈಲಾಸ, ಬೆಳ್ಳಿಬೆಟ್ಟ, ಅಲ್ಲಿಯ ರುದ್ರ ಎಲ್ಲರೂ ಶಾಶ್ವತ. ಆದರೆ ಅಲ್ಲಮನ ಪರಿಕಲ್ಪನೆಯ ಪ್ರಕಾರ ಅವು ಯಾವುವೂ ಶಾಶ್ವತವಲ್ಲ. ಇವೆಲ್ಲಕ್ಕೂ ಅಳಿವುಂಟೆಂಬ ಅರಿವು ಶರಣರಿಗೆ ಅಗತ್ಯ. ''ಕೈಲಾಸವೆಂಬುದೊಂದು ಬೆಳ್ಳಿಯ ಬೆಟ್ಟ। ಅಲ್ಲಿದ್ದಾತ ರುದ್ರನೊಬ್ಬ। ಆ ಬೆಟ್ಟಕ್ಕೂ ಆರುದ್ರಂಗೆಯೂ ಪ್ರಳಯ ಉಂಟೆಂಬುದ। ಗುಹೇಶ್ವರಾ ನಿಮ್ಮ ಶರಣ ಬಲ್ಲನು।'' (ವ.ಸು ೧೧೪೭) ಕಾಲಚಕ್ರ ವಚನದಲ್ಲಿ ಅಲ್ಲಮನು ನಿರೂಪಿಸಿರುವ ಕಾಲದ ಅಗಾಧತೆ, ಅಲ್ಲಿಯ ಲೆಕ್ಕಾಚಾರ ತಲೆತಿರುಗಿಸುವಂತಹದು. ಅದೆಷ್ಟು ಬ್ರಹ್ಮ, ವಿಷ್ಣು ರುದ್ರರು, ಅದೆಷ್ಟು ಶೂನ್ಯಗಳು, ಅದೆಷ್ಟು ಕಾಳಾಂಧರಗಳು ಇದು ತನಕ ಮುಗಿದಿರುವ ಕಾಲದಲ್ಲಿ! ಇಂತಹ ಕಾಲಚಕ್ರದ ಉರುಳುಗಳಲ್ಲಿ ಯಾವುದೂ ಶಾಶ್ವತವಲ್ಲ, ಎಲ್ಲಕ್ಕೂ ಪ್ರಳಯ ಉಂಟು. ಮತ್ತೆ ಆದಿಯೂ ಉಂಟು. ಇದು ಸೃಷ್ಟಿ-ಸ್ಥಿತಿ-ಲಯಗಳ ರಹಸ್ಯದ ನಿರಂತರ ಪ್ರಕ್ರಿಯೆ. ಕಾಲಚಕ್ರದ ಗತಿಯಲ್ಲಿ ಪ್ರಳಯ ಎಂದರೇನೆಂದು ವಿವರಿಸುವ ಅಲ್ಲಮ ವೈಯಕ್ತಿಕ ಜೀವನದಲ್ಲಿ ಪ್ರಳಯವೆಂದರೇನೆಂಬುದನು, ಅತ್ಯಂತ ಮಾರ್ಮಿಕವಾಗಿ ವಿವರಿಸುತ್ತಾನೆ.

"ಹಿಂದೆ ಎಷ್ಟು ಪ್ರಳಯ ಬಂದಹುದೆಂದರಿಯೆ
ತನ್ನ ಸ್ಥಿತಿಯ ತಾನರಿಯದಡೆ ಅದೇ ಪ್ರಳಯ ವಲ್ಲಾ
ತನ್ನ ವಚನ ತನಗೆ ಹಗೆಯಾದಡೆ ಅದೇ ಪ್ರಳಯ ವಲ್ಲಾ
ಇಂತಹ ಪ್ರಳಯ ನಿನ್ನಲ್ಲುಂಟೆ ಗುಹೇಶ್ವರಾ" (ವ.ಸು. ೯೫೫).

ಇದಕ್ಕಿಂತಲೂ ಮಾರ್ಮಿಕವಾಗಿ, ವ್ಯಕ್ತಿ ನಡೆ ನುಡಿಯಲ್ಲಿ ಸಾಧಿಸಬೇಕಾದ ಸಾಮರಸ್ಯವನ್ನು ತಿಳಿಯಪಡಿಸುವುದು ಸಾಧ್ಯವಿಲ್ಲವೆನಿಸುತ್ತದೆ. ವ್ಯಕ್ತಿ ತನ್ನ ವೈಯಕ್ತಿಕ ನೆಲೆಯಲ್ಲಿ ತನ್ನ ತಾನರಿಯಲು ವಿಫಲನಾದಾಗ ಅದು ಪ್ರಳಯ, ಅಂದರೆ ವಿನಾಶ, ತನ್ನ ನೆಲೆಯಲ್ಲಿ ತನ್ನ ಮಿತಿಯಲ್ಲಿ, ಮಾತು ಕೃತಿಗಳಲ್ಲಿ ಸಾಮರಸ್ಯ ಸಾಧಿಸಲು ವಿಫಲನಾದಾಗ ಅದು ಪ್ರಳಯವೆನ್ನುತ್ತಾನೆ ಅಲ್ಲಮ. ಬಹಿರಾಡಂಬರ, ಢೋಂಗಿತನ, ಸೋಗು, ಇವುಗಳಿಂದಾಗಿ, ವ್ಯಕ್ತಿಯ ಅಂತರಂಗ ಬಹಿರಂಗಗಳಲ್ಲಿ ಅಸಾಮರಸ್ಯ ಉಂಟಾಗಿ, ಕಾಪಟ್ಯ ಅವನಲ್ಲಿ ನೆಲೆಯಾಗುತ್ತದೆ. ಇಂತಹದೊಂದು ಪರಿಸ್ಥಿತಿ ನೈಸರ್ಗಿಕ ಪ್ರಳಯಕ್ಕಿಂತಲೂ, ವೈಯಕ್ತಿಕ ನೆಲೆಯಲ್ಲಿ ಹಾಗೂ ಸಾಮಾಜಿಕ ನೆಲೆಯಲ್ಲಿ ವಿಪತ್ಕಾರಿ ಮತ್ತು ವಿನಾಶಕಾರಿ. ಇಂತಹ ಪ್ರಳಯ, ಇಂತಹ ವಿಷಮತೆ ಅಸಾಮರಸ್ಯ ಗುಹೇಶ್ವರನಲ್ಲಿರಲು ಸಾಧ್ಯವೇ ಎಂದು ಪ್ರಶ್ನಿಸುತ್ತಾ, ವ್ಯಕ್ತಿ ಸಾಧಿಸಬೇಕಾದದ್ದೇನು ಎಂಬುದನ್ನು ಸೂಚಿಸುತ್ತಾನೆ. ತನ್ನ ವಚನಗಳಿಗೆ ತಾನೇ ಹಗೆಯಾಗುವುದೆಂದರೆ, ವಚನ ಭ್ರಷ್ಟನಾಗುವುದು ಪ್ರಳಯಕ್ಕೆ ಸಮ. ಇಂತಹ 'ಪ್ರಳಯ' ಗುಹೇಶ್ವರನಲ್ಲಿರಲು ಸಾಧ್ಯವಿಲ್ಲ...

ವ್ಯಕ್ತಿ ಜೀವನದಲ್ಲಿ ಕಾಲದ ವಿವಿಧ ಹಂತಗಳಿಗೆ ಹೇಗೆ ಬೆಲೆಕೊಡಬೇಕು ಎಂಬ ಅಲ್ಲಮನ ವಚನ ಮನನಯೋಗ್ಯವಾಗಿರುವುದಲ್ಲದೇ, ಅನೇಕ ಆಧುನಿಕರ ಚಿಂತನಗಳೊಂದಿಗೆ ಮೇಳೈಸುತ್ತದೆ.

"ಹಿಂದಣ ಕಥೆಯ ಹೇಳುವಾತ ಹೆಡ್ಡ, ಮುಂದಣ ಕಥೆಯ ಹೇಳುವಾತ ಮೂಢ, ಇಂದಿನ ಘನದ ಹೇಳುವಾತನೇ ಹಿರಿಯನಯ್ಯಾ', ವರ್ತಮಾನ, ಅತ್ಯಂತ ಮೌಲ್ಯವುಳ್ಳದ್ದೆನ್ನುವ ಅಲ್ಲಮನ ಅಭಿಪ್ರಾಯ, ಕ್ರಿಸ್ತಶಕ ನೂರಿಪ್ಪತ್ತರಲ್ಲಿ ಜನಿಸಿ, ರೋಮಿನ ಚಕ್ರವರ್ತಿಯಾಗಿದ್ದ ಶ್ರೇಷ್ಠ ಚಿಂತಕ ಮಾರ್ಕಸ್ ಆರೀಲಿಯಸ್‌ನ ವಿಚಾರಗಳೊಂದಿಗೆ ಹೊಂದಿಕೆಯಾಗುವುದು ಅಚ್ಚರಿಯೆನಿಸುತ್ತದೆ. ಮಾರ್ಕಸ್ ಆರೀಲಿಯಸ್ ಹೇಳುತ್ತಾನೆ ("ಮಾರ್ಕಸ್ ಆರೀಲಿಯಸ್‌ನ ಚಿಂತನೆಗಳು")" ನೀನು ಮೂರು ಸಾವಿರ ವರ್ಷಗಳು ಅಥವಾ ಹತ್ತು ಸಾವಿರ ವರ್ಷಗಳಷ್ಟು ಕಾಲ ಬದುಕಬಹುದು. ಆದರೆ ನೆನಪಿಡು, ಯಾವ

ವ್ಯಕ್ತಿಯೂ, ಈಗ ತಾನು ಬದುಕಿರುವಾಗಿನ ಜೀವನವನ್ನಲ್ಲದೇ, ಬೇರೆ ಯಾವುದೇ ಕಾಲದ ಜೀವನವನ್ನು ಕಳೆದುಕೊಳ್ಳಲಾರ.... ಯಾವುದೇ ವ್ಯಕ್ತಿಯು ತನ್ನ ಗತಕಾಲವನ್ನಾಗಲೀ, ಭವಿಷ್ಯಕಾಲವನ್ನಾಗಲೀ ಕಳೆದುಕೊಳ್ಳಲಾರ. ತನ್ನ ಬಳಿ ಇರದೇ ಇರುವುದನ್ನು ಕಳೆದುಕೊಳ್ಳುವುದು ಹೇಗೆ.... ಧೀರ್ಘಯುಷಿ, ಅಲ್ಪಾಯುಷಿ ಇಬ್ಬರೂ ಕಳೆದುಕೊಳ್ಳುವುದು ವರ್ತಮಾನವನ್ನು ಮಾತ್ರ''. ಮಾರ್ಕಸ್‌ನ ಈ ಅಭಿಪ್ರಾಯ ಟಿ.ಎಸ್.ಎಲಿಯಟ್‌ನ ಈ ಸಾಲುಗಳಲ್ಲಿ ಪ್ರತಿಧ್ವನಿಸುತ್ತದೆ'' ಭೂತಕಾಲ ಮತ್ತು ಭವಿಷ್ಯ ಕಾಲ । ಏನಾಗಬಹುದಿತ್ತು ಮತ್ತು ಏನಾಗಿಹುದು। ಎಲ್ಲವೂ ಒಂದೆ ಗುರಿ ಸೂಚಿಸುವುದು। ಅದು ಎಂದೂ ವರ್ತಮಾನವಾಗಿಹುದು।''.

ಈ ಅಭಿಪ್ರಾಯ ಸುಮಾರು ಹನ್ನೊಂದನೆಯ ಶತಮಾನದಲ್ಲಿ ಬದುಕಿದ್ದ ಪರ್ಷಿಯಾದ ಕವಿ, ವಿಜ್ಞಾನಿ, ದಾರ್ಶನಿಕ ಉಮರ್ ಖಯ್ಯಾಮನ ರುಬಾಯಿಯತ್‌ನ್ನು ನೆನಪಿಸುತ್ತದೆ. ''Dead Yesterday, unborn tomorrow, why tret about when if today be sweet''. ಉಮರ್ ಖಯ್ಯಾಮನು ಕೂಡ ಮೆಲ್ನೋಟಕ್ಕೆ, ಚಾರ್ವಾಕ ಸಿದ್ಧಾಂತ ಪ್ರತಿಪಾದಕನಂತೆ ಕಂಡರೂ, ಅವನ ಕವಿತೆಗಳಲ್ಲಿ ಆಳವಾದ ದಾರ್ಶನಿಕತೆಯಿದೆ. ಈ ಎಲ್ಲ ಅಭಿಪ್ರಾಯಗಳ ನೆಲೆಯಲ್ಲಿ ನೋಡುವಾಗ ಅಲ್ಲಮನು ವರ್ತಮಾನಕ್ಕೆ ಕೊಡುವ ಪ್ರಾಶಸ್ತ್ಯ ಅದೆಷ್ಟು ಮಹತ್ವಪೂರ್ಣವೆನಿಸುತ್ತದೆ. ''ಹಿಂದಣ ಕಥೆಯನ್ನು ಹೇಳುವಾತ ಹೆಡ್ಡ'' ನೆಂದಾಕ್ಷಣ ಅಲ್ಲಿಯ ಹಿಂದಿನದನ್ನೆಲ್ಲಾ ನೆನೆಯಲೇ ಬೇಡವೆನ್ನುವುದಿಲ್ಲ. ತನ್ನದೇ ಒಂದು ವಚನದಲ್ಲಿ ಅರಿವು ಎಂದರೇನೆಂದು ಹೀಗೆ ವಿವರಿಸುತ್ತಾನೆ.

''ಹಿಂದಣ ಹೆಜ್ಜೆಯನೋಡಿ ಕಂಡಲ್ಲದೆ। ನಿಂದ ಹೆಜ್ಜೆಯನರಿಯಬಾರದು'' ಹಿಂದಣ ಕಥೆಯನ್ನು ಅರಿಯುವ ಮಹತ್ವವನ್ನು ತಿಳಿಸುತ್ತಾನೆ. ಆದರೆ, ಹಿಂದಣ ಕಥೆ, ಮುಂದಣ ಕಥೆಯ ಬಗೆಗಿನ ವಿಪರೀತ ಚಿಂತೆಗಳು ಇಂದಿನ ಜೀವನದ ಮೇಲೆ ತಮ್ಮ ಕರಾಳ ನೆರಳನ್ನು ಚೆಲ್ಲವಾರದಷ್ಟೆ. ಹಿಂದು, ಮುಂದಿನ ಸಮನ್ವಯದ ಸಾಧನೆಯನ್ನು ಐತಿಹಾಸಿಕ ಪ್ರಜ್ಞೆ ಎಂದೂ ಹೇಳಬಹುದು. ಹಾಗಾಗಿ ಇಂದೆಯೋ ಇಂದೆ ಮನವಾ'' ಎಂದು ವರ್ತಮಾನಕ್ಕೆ ಮಹತ್ವ ಕೊಡುತ್ತಾನೆ. ಇದು ನಾವು ಅರಿಯಬೇಕಾದ ಮಹತ್ವದ ಸಂಗತಿ.

ಅಲ್ಲಮನ ಅನೇಕ ಬೆಡಗಿನ ವಚನಗಳು, ಪಾರಮಾರ್ಥಿಕ ತತ್ವಗಳನ್ನರುಹುವಂತೆಯೇ ಲೌಕಿಕ ಜೀವನದ ರಹಸ್ಯವನ್ನು ತಿಳಿಸುತ್ತವೆ. ಅವನು ಹಲವು ವಚನಗಳಲ್ಲಿ ಹುಲಿ ಮತ್ತು ಹುಲ್ಲೆಯ ಪ್ರತಿಮೆಯನ್ನು ಬಳಸುತ್ತಾನೆ.

"ಹುಲಿಯ ತಲೆಯ ಹುಲ್ಲೆ! ಹುಲ್ಲೆಯ ತಲೆಯ ಹುಲಿ,

ಈ ಎರಡರ ನಡು ಬಂದಾಯಿತ್ತು। ಹುಲಿಯಲ್ಲಿ ಹುಲ್ಲೆಯಲ್ಲಿ

ಕೆಲದಲ್ಲೊಂದು ಮೆಲುಕಾಡಿತ್ತು ನೋಡಾ.

ತಲೆಯಿಲ್ಲದ ಮುಂಡ ತರಗೆಲೆಯ ಮೆದ್ದಡೆ

ಎಲೆ ಮರೆಯಾಯಿತ್ತು ಕಾಣಾ ಗುಹೇಶ್ವರಾ" (ಆಸುರೀ ಮತ್ತುದೈವೀ ಶಕ್ತಿಗಳ ಸಂಮಿಳನ)

ಈ ವಚನದ ಆಧ್ಯಾತ್ಮಿಕ ಅರ್ಥ, ಬೇರೆಯೇ ಇರಬಹುದು, ಆದರೆ, ಹುಲಿ ಮತ್ತು ಹುಲ್ಲೆ ಈ ಎರಡರ ಸಂಯೋಗದ ಪ್ರಾಣಿಯ ಕಲ್ಪನೆ ಚಕಿತಗೊಳಿಸುತ್ತದೆ. ನರಸಿಂಹನ ಅವತಾರ ಕಲ್ಪನೆಯಲ್ಲಿ ಸಿಂಹದ ತಲೆ, ಮನುಷ್ಯನ ದೇಹ ಒಂದಾಗುತ್ತದೆ. ಹುಲಿ ಬಲ, ಪೌರುಷ, ಕ್ರೌರ್ಯ, ಸೌಂದರ್ಯಗಳ ಪ್ರತೀಕವಾದಂತೆ ಹುಲ್ಲೆ ದೌರ್ಬಲ್ಯ, ಸೌಮ್ಯ ಕರುಣೆ, ಅಸಹಾಯಕತೆ, ಸೌಂದರ್ಯಗಳ ಪ್ರತೀಕ, ಬೇರೆ ಬೇರೆಯಾಗಿದ್ದಾಗ, ಎರಡೂ ಒಂದಕ್ಕೊಂದು ಪೂರಕವಾಗುವ ಬದಲು, ಒಂದು ಮತ್ತೊಂದರ ನಾಶಕ್ಕೆ ಕಾರಣವಾಗುತ್ತದೆ. ಹುಲಿ, ಹುಲ್ಲೆ ಎರಡರ ನಡು ಬಂದಾದಾಗ? ಏನಾಗಬಹುದು? ತನ್ನನ್ನು ತಾನೇ ನಾಶ ಮಾಡಿಕೊಳ್ಳದಿರಬಹುದು, ತನ್ನ ವಿನಾಶಕ್ಕೆ ತಾನೇ ಕಾರಣನೂ ಆಗಬಹುದು. ಈ ಜಗತ್ತಿನಲ್ಲಿ ಜೀವಿಸಲು ಹುಲ್ಲೆಗೆ, ಹುಲಿಯ ಪೌರುಷ, ಹುಲಿಗೆ ಹುಲ್ಲೆಯ ಸೌಮ್ಯಶಕ್ತಿ ಎರಡರದೂ ಅವಶ್ಯಕತೆಯಿದೆ. ಜೀವನದಲ್ಲಿ ಕೇವಲ ಸೌಮ್ಯತೆ, ಅಸಹಾಯಕತೆಗಳು ಪ್ರಯೋಜನಕ್ಕೆ ಬರುವುದಿಲ್ಲ ಇದರೊಂದಿಗೆ ಒಂದಷ್ಟು ಬಲ, ಕ್ರೌರ್ಯಗಳೂ ಬೇಕೆನಿಸುತ್ತದೆ. ಅತ್ಯಂತ ಪರಿಶುದ್ಧವಾದ ಬಂಗಾರಕ್ಕೆ ಚೂರಾದರೂ ಬೇರೆ ಲೋಹ (base metal) ಸೇರಿಸದಿದ್ದರೆ ಆಭರಣ ತಯಾರಿಸಲು ಸಾಧ್ಯವಿಲ್ಲವೆನ್ನುತ್ತಾರೆ. ಹಾಗೆಯೇ, ಋಣಧ್ರುವ, ಧನಧ್ರುವಗಳು ಸೇರದಿದ್ದರೆ ವಿದ್ಯುತ್ತಿನ ಉತ್ಪತ್ತಿ ಸಾಧ್ಯವಿಲ್ಲ. ಋಣಾತ್ಮಕ, ಧನಾತ್ಮಕ ಗುಣಗಳ, ಮೌಲ್ಯಗಳ ಸಂಯೋಗವಿರದೆ ಬದುಕು ಸಾಧ್ಯವಿಲ್ಲವೆಂಬುದನ್ನು ಈ ಹುಲ್ಲೆ ಹುಲಿಯ ಒಂದಾಗುವಿಕೆಯ ಕಲ್ಪನೆಯಲ್ಲಿ ಮೂಡಿಬಂದಿದೆಯೆನಿಸುತ್ತದೆ. ಎಲ್ಲ ಸಾಮಾನ್ಯರೂ ಅರಿಯಬೇಕಾದ ಎಲ್ಲರ ಅನುಭವಕ್ಕೆ ಬಂದಿರುವ ಸಂಗತಿ ಇದು. ಒಳಿತು ಕೆಡುಕಿನ ದ್ವಂದ್ವ ಕಂಡುಬರುತ್ತದೆ.

ಅಲ್ಲಮನ ವಚನಗಳು ಸುಂದರ ಪ್ರತಿಮೆಗಳಿಂದ, ಕಾವ್ಯರಸ ತುಂಬಿ ತುಳುಕುತ್ತಿದ್ದು ಅವನು ಕವಿಯೋ, ದಾರ್ಶನಿಕನೋ, ಶರಣನೋ, ಅನುಭಾವಿಯೋ ತಿಳಿಯದಂತಾಗುತ್ತದೆ. ಭಕ್ತನಾದವನು ತನ್ನ ಇಷ್ಟದೈವದೊಡನೆ, ಗುಹೇಶ್ವರನೊಡನೆ

ಸಾಧಿಸುವ ಅವಿನಾಭಾವದ ನಂತರ ಸಾಧಿಸುವ ಅದ್ವಯ ಸ್ಥಿತಿಯನ್ನು ಅಲ್ಲಮ ಹೀಗೆ ವಿವರಿಸುತ್ತಾನೆ.

''ಕೆಂಡದ ಗಿರಿಯ ಅರಗಿನ ಬಾಣದಲೆಚ್ಚಡೆ
ಮರಳಿ ಆ ಬಾಣವ ನರಸಲುಂಟೆ?
ಮಂಜಿನ ಶಿವಾಲಯಕ್ಕೆ ಬಿಸಿಲ ಕಳಸವುಂಟೆ?
ಗುಹೇಶ್ವರನೆಂಬ ಲಿಂಗವನರಿದ ಬಳಿಕ
ಮತ್ತೆ ಮರಳಿ ನೆನೆಯಲುಂಟೆ?'' (೧೧೩೯).

ನಿಗಿನಿಗಿ ಉರಿಯುವ ಕೆಂಡದ ಗಿರಿ ಗುಹೇಶ್ವರನಾದರೆ, ಭಕ್ತ ಅಥವಾ ಸಾಧಕ ಅರಗಿನ ಬಾಣ, ಕೆಂಡದ ಗಿರಿಗೆ ತಗುಲಿದ ಬಾಣ, ಎಷ್ಟೇ ಚೂಪಾಗಿದ್ದರೂ ತನ್ನ ರೂಪನ್ನು, ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವೆ? ಕೆಂಡದ ಗಿರಿ, ಅರಗಿನ ಬಾಣ ಎರಡಕ್ಕೂ, ಸ್ನೇಹವೋ ವೈರವೋ ಯಾರು ಹೇಳಬೇಕು? ಗುಣದಲ್ಲಿ ವಿಸ್ತಾರದಲ್ಲಿ ಅಜಗಜಾಂತರ. ಇಂತಹ ವಿರುದ್ಧ ಗುಣಗಳ ದೃಶ್ಯೋಪಮೆ ಮೆಟಫಿಸಿಕಲ್ ಕವಿಗಳ Conceit ಎಂಬ ರೂಪಕೋಪಮೆಯನ್ನು ನೆನಪಿಗೆ ತರುತ್ತದೆ. ಮಂಜಿನ ಶಿವಾಲಯ, ಬಿಸಿಲ ಕಳಸ, ಸಾಮಾನ್ಯನ ಕಲ್ಪನೆಗೆ ನಿಲುಕದ ಕಟ್ಟಡ, ಒಂದನೊಂದು ಸೋಕಿ ಎರಡಳಿದು ಒಂದಾಗುವ ಅದ್ಭುತ. ಊಹಿಸಿದಷ್ಟು ಅರ್ಥವಾದಂತೆ ತೋರಿ ಒಗಟಾಗುಳಿಯುವ ಚಮತ್ಕಾರ. ಈ ಕರ್ತಾರನ ಕಮ್ಮಟದಲ್ಲಿ ಹೇಗಿರಬೇಕು? ಹೀಗಿರಬೇಕೆಂಬ ನೀತಿ ಸಂಹಿತೆ, ಅಪರೂಪವಾಗಿ ಈ ವಚನದಲ್ಲಿ ಸ್ಪಷ್ಟವಾಗಿ ಮೂಡಿ ಬಂದಿದೆ. ಅಲ್ಲಮ ಜೀವನದಿಂದ ವಿಮುಖವಾಗಿ ಹೋಗುವ ದಾರಿಯನ್ನುಪದೇಶಿಸುವುದಿಲ್ಲ. ಕಣ್ಣಮುಂದಿರುವ ಬದುಕನ್ನು ಅರಿತು ಸುಮಾರ್ಗದಲ್ಲಿ ಸಾಗಿ, ಗುಹೇಶ್ವರನೆಂಬ ಮಹಾಬಯಲಲ್ಲಿ ತಾನೂ ಬಯಲಾಗುವ ಕಾಣ್ಕೆ'ಯನ್ನು ಮುಂದಿಡುತ್ತಾನೆ. ಇದು ಸಾಮಾನ್ಯನಿಗೂ, ಸಾಧಕನಿಗೂ ಶ್ರೇಯಸ್ಸಿನ ದಾರಿ

''ಸ್ತುತಿ ನಿಂದೆಗೆ ಕಿವುಡಾಗಿರಬೇಕು
ಪರಧನ ಪರಸತಿಯರಿಗೆ ಅಂಧಕನಾಗಿರಬೇಕು.
ವಾಕಿನಿಂ ಪರಬ್ರಹ್ಮನ ನುಡಿವ ಕುತರ್ಕಿಗಳ ಎಡೆಯಲ್ಲಿ
ಮಾಗಿಯ ಕೋಗಿಲೆಯಂತೆ ಮೂಗನಾಗಿರಬೇಕು
ಒಂದು ಎಂದು ಅರಿದಲ್ಲಿ ಸಂದೇಹವಿಲ್ಲದಿರಬೇಕು.
ಗುಹೇಶ್ವರ ಲಿಂಗದಲ್ಲಿ ತನ್ನತಾ ಮರೆದಿರಬೇಕು'' (೯೧೦).

(ಮುಂದುವರಿಯುವುದು)

ಸಣ್ಣಕತೆ

# ದೂರದಿಂದ ಬಂದಂಥ ಸುಂದರಾಂಗ ಜಾಣ

- ಆರ್.ಆರ್.ಪಾಂಗಾಳ

'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ'

ಯಾಕೋ ಇಂದು ಮನಸ್ಸಿಗೆ ತುಂಬಾ ಬೇಸರವಾಗಿದೆ ಎಂದು ಹಾಡು ಕೇಳೋಣ ಎಂದು ಸಿ.ಡಿ ಹಾಕಿದಾಗ ಈ ಹಾಡು ಬರಬೇಕೇ? ಆದರೂ ಕೇಳುತ್ತಾ ಹಾಗೆಯೇ ಈಸಿ ಚಯರ್‌ನ ಮೇಲೊರಗಿದೆ. ಹಾಡಿನ ಕೊನೆ,

'ಆದಿಕೇಶವ ಇದ ಬಲ್ಲ' ಎಂದು ಮುಗಿಯುವುದರೊಳಗಾಗಿಯೇ ಅದನ್ನು ನಿಲ್ಲಿಸಿ ಹಾಗೆಯೇ ಕಣ್ಣು ಮುಚ್ಚಿ ದೀಪ ಆರಿಸಿ ಇದ್ದಲ್ಲಿಯೇ ಒರಗಿದೆ. ಮನಸ್ಸು ಬಹಳ ವ್ಯಗ್ರವಾಗಿದೆ. ಇಂದು ಸಂಜೆ ಯು.ಎ.ಎಸ್ ಕ್ಯಾಂಪಸ್‌ನಲ್ಲಿ ವಾಕಿಂಗ್‌ಗೆ ಹೋದಾಗ ಕಂಡ ದೃಶ್ಯ ಮರುಕಳಿಸಿ ಬರುತ್ತಿದೆ.

ಇಂದಲ್ಲ, ಸುಮಾರು ಐದು ಆರು ವರ್ಷಗಳಿಂದಲೂ ನನ್ನ ಸ್ನೇಹಿತ ಶ್ರೀಕಂಠಯ್ಯ ಮತ್ತು ನಾನು ಸಂಜೆಯ ನಾಲ್ಕೂವರೆಗೆ ನಮ್ಮ ಮನೆಯ ಶಿವವಿಷ್ಣು ಗುಡಿಯ ಮುಂದಿಂದ ವಾಕಿಂಗ್‌ಗೆ ಹೊರಟು ಸುಮಾರು ಐದುಮುಕ್ಕಾಲರ ಹೊತ್ತಿಗೆ ಪುನಃ ಕ್ಯಾಂಪಸ್‌ನಲ್ಲಿ ವಾಕಿಂಗ್ ಮುಗಿಸಿ ಹಿಂದೆ ಬಂದರೆ ಅಲ್ಲಿದ್ದ ಕಾರು ಹತ್ತಿ ಅವರನ್ನು ಅವರ ಮನೆಯ ಬಳಿ ಇಳಿಸಿ ನಾನು ನನ್ನ ಕ್ಲಿನಿಕ್‌ಗೆ ಹೋಗುವುದು ರೂಢಿ. ಇಂದು ಮಾಡಿದುದೂ ಅದೇ.

ಸುಮಾರು ಆರೆಂಟು ತಿಂಗಳ ಹಿಂದೆ ನಡೆದ ಘಟನೆ ದೊಡ್ಡದಲ್ಲ ಸಾಮಾನ್ಯವಾದುದ್ದು. ಕ್ಯಾಂಪಸ್‌ನಲ್ಲಿ ಹೈನುಗಾರಿಕೆಯ ಡಿಪಾರ್ಟ್‌ಮೆಂಟಿನ ಮುಂದೆ ಒಂದು ಒಳ ಕ್ರೀಡಾಂಗಣ ಇದೆ. ಆ ಕಟ್ಟಡ ಮತ್ತು ಪಕ್ಕದ ಕಾಂಪೌಂಡ್‌ನ ಮಧ್ಯೆ ಸುಮಾರು ಹತ್ತು ಅಡಿ ಅಗಲದ ಉದ್ದ ಜಾಗ ಇದೆ. ಅಂದು ನಾವು ನಡೆದು ಹೋಗುತ್ತಿದ್ದಾಗ ಒಂದಷ್ಟು ನಾಯಿಗಳು ಗದ್ದಲ ಎಬ್ಬಿಸುತ್ತಿದ್ದವು. ಕರಿಬಿಳಿಮಚ್ಚೆಯ ಒಂದು ಹೆಣ್ಣು ನಾಯಿ ಅದರ ಸುತ್ತಮುತ್ತ ಹಲವಾರು ಗಂಡು ನಾಯಿಗಳು. ಅದೇ ಬಣ್ಣದ ಗಂಡುನಾಯಿ ಒಂದು. ಕಣ್ಣ ಮೇಲೆ ಕಂದು ಬಣ್ಣದ ಮಚ್ಚೆ, ಸುಂದರವಾಗಿ ಕಾಣುತ್ತಿತ್ತು. ಅಷ್ಟೊಂದು ಗಂಡು ನಾಯಿಗಳ ಮಧ್ಯೆ ಈ ಕಂದುಮಚ್ಚೆಯ ನಾಯಿ ತನ್ನ ಪ್ರಿಯುದನ್ನೆಯ ಮನಗೆದ್ದು ಅದನ್ನು ಸೇರಿತ್ತು ಅವುಗಳತ್ತ ಕಲ್ಲೆಸೆಯುವ

ಬಾಲ್ಯಾವಸ್ಥೆಯಾಗಲೀ, ಕಂಡು ಪೋಲಿ ಮಾತನಾಡುವ ಯೌವನಾವಸ್ಥೆಯಾಗಲೀ, ಕಂಡೂ ಕಾಣದಂತೆ ಮುಖ ತಿರುಗಿಸುವ ಪ್ರೌಢಾವಸ್ಥೆಯಾಗಲೀ ಅಲ್ಲ ಅದನ್ನೂ ದಾಟಿ ಈಗ ವಯಸ್ಸಾಗಿದೆ. ಟಿ.ವಿ.ಯಲ್ಲಿ ಬರುವ ಅನಿಮಲ್ ಪ್ಲಾನೆಟ್ ಚಾನೆಲ್ ಕಂಡು ಆ ಪ್ರಭಾವ ನಮ್ಮ ಮೇಲಾಗಿ ನನ್ನ ಸ್ನೇಹಿತರೂ ನಾನೂ ಈ ನಾಯಿಗಳ ಪ್ರೇಮಮಯ ಲೋಕದ ಬಗ್ಗೆ ಮಾತನಾಡುತ್ತಾ ಮುಂದೆ ನಡೆದಿದ್ದೆವು. ಮುಂದಿನ ಹಲವು ದಿನಗಳಲ್ಲಿ ಅಲ್ಲಲ್ಲಿ ಈ ದೃಶ್ಯ ಕಂಡು ಬಂದಿತ್ತು.

ಮುಂದೆ ಒಂದೆರಡು ವಾರಗಳಲ್ಲಿ, ನಾಯಿಗಳ ಹಿಂಡು ಮಂಗಮಾಯವಾಗಿತ್ತು. ಅವುಗಳ ಕೂಡುವ ಕಾಲ ಮುಗಿದಿರಬೇಕು. ಆದರೆ ಈ ಎರಡು ಗಂಡು ಹೆಣ್ಣುನಾಯಿಗಳು ಮಾತ್ರ ದೀರ್ಘಕಾಲದಿಂದ ಮದುವೆ ಆದ ದಂಪತಿಗಳಂತೆ ಜೊತೆಯಲ್ಲೇ ಓಡಾಡುತ್ತಿರುವುದನ್ನು ಕಂಡ ನಮಗೆ ಆಶ್ಚರ್ಯ. ಹೆಣ್ಣುನಾಯಿಯ ಹೊಟ್ಟೆ ಬಲಿಯುತ್ತಾ ಬಂದಂತೆ ಅದರ ಓಡಾಟವೂ ಕಡಿಮೆ ಆಗತೊಡಗಿತು. ಗಂಡು ಯಾವಾಗಲೂ ಅದರ ಜೊತೆಯಲ್ಲಿ ನಮ್ಮಲ್ಲೂ ಇಂತಹ ಸೌಹಾರ್ದವಿದ್ದಲ್ಲಿ! ಮುಂದೆ ಅದೇ ಸಂದಿಯಲ್ಲಿ ಆ ಹೆಣ್ಣು ನಾಯಿ ಐದಾರು ಮರಿಗಳನ್ನು ಹಾಕಿತು. ಒಂದೆರಡು ಬಾರಿ ಗಂಡು ಬಾಯಿಯಲ್ಲಿ ಏನೋ ಆಹಾರದ ಪೊಟ್ಟಣ ಹಿಡಿದುಕೊಂಡು ಆ ಕಡೆ ಓಡಿ ಬಂದಿದ್ದನ್ನು ನಾವು ಕಂಡಿದ್ದೆವು ನಮ್ಮ ದಿನನಿತ್ಯದ ವಾಕಿಂಗ್‌ನಲ್ಲಿ ಇವುಗಳ ಸಂಸಾರವೂ ನಮ್ಮ ಮಾತಿಗೆ ಗ್ರಾಸವಾಗುತ್ತಿತ್ತು. ಮರಿಗಳು ಆ ಸಂದಿಯಿಂದ ಆಚೆ ಓಡಿಬಂದು ತಾಯಿಯ ಎದೆ ಹಾಲು ಹೀರುವ ದೃಶ್ಯ. ನಿಧಾನವಾಗಿ ಅವು ಬಲಿತು ಬಲಿಷ್ಠವಾಗುವ ನೋಟ, ತಾಯಿ ಅಲ್ಲಿಂದೆದ್ದು ಆಚೀಚೆ ತಿರುಗಾಡಲು ಹೋದಾಗ ತಂದೆ ಅವುಗಳ ಮೇಲೆ ಕಣ್ಣಿಟ್ಟು ಕಾಯುವ ನೋಟ ನಮಗಂತೂ ತುಂಬ ಸಂತೋಷ ಕೊಡತೊಡಗಿತ್ತು. ನಮ್ಮ ದಿನನಿತ್ಯದ ವಾಕಿಂಗ್, ಆ ತಾಯಿಯ ತಿರುಗಾಟ ತಂದೆಯ ಕಾಯುವ ಪಾಳಿ ಒಂದೇ ಆಗಿದ್ದಿರಬಹುದು. ತುಸು ಬಲಿತ ಮರಿಗಳು ಆ ಕಡೆ ಈ ಕಡೆ ಓಡಾಡುವಾಗ ಗದರುವ ತಂದೆ-ಎಷ್ಟೊಂದು ಮುಂದವಿದ್ದಿರಬೇಕು ಆ ಸಂಸಾರದಲ್ಲಿ. ಈಗ ಉಳಿದಿರುವುದು ಎರಡೇ ಮರಿಗಳು ಸಾಕಷ್ಟು ದೊಡ್ಡದಾಗಿವೆ.

ಇಂದೇನೋ ಹೊಸತಿದೆ ಎಂದಿನಂತಿಲ್ಲ. ಯಾಕೋ ನನಗೆ ನನ್ನ ಕ್ಲಿನಿಕ್‌ಗೆ ಬರುತ್ತಿರುವ ಆ ವ್ಯಕ್ತಿ, ಅವನನ್ನು ನಾನು ಜನಮೇಜಯರಾಯ ಎಂದೇ ಕರೆಯುತ್ತೇನೆ, ನನ್ನ ತಂದೆಯವರು ಯಾರಾದರೂ ಸಾಧು ಸ್ವಭಾವದ ವ್ಯಕ್ತಿಯನ್ನು ಕಂಡಾಗ ಕರೆಯುತ್ತಿದ ಹೆಸರಿದು. ಅವನ ಹೆಂಡತಿ; ಈಗ ನಾನು ಮಹಾಭಾರತದ ಎಕ್ಸ್‌ಪರ್ಟ್ ಆದ

ಬಳಿಕ ಜನಮೇಜಯನ ಹೆಂಡತಿ ವಪುಷ್ಟೆ ಅಂತಲೇ ಆವಳನ್ನು ಕರೆಯುತ್ತೇನೆ; ಏಳು ವರ್ಷದಿಂದ ಹತ್ತು ವರ್ಷದೊಳಗಿನ ಇಬ್ಬರು ಮುದ್ದಿನ ಹೆಣ್ಣು ಮಕ್ಕಳೊಡನೆ ನನ್ನಲ್ಲಿಗೆ ಆಗಾಗ ಬರುತ್ತಿದ್ದರು. ಇದ್ದಕ್ಕಿದ್ದಂತೆ ಅವರು ನನ್ನಲ್ಲಿಗೆ ಬರುವುದು ನಿಂತು ಹೋಯಿತು. ಬೇರೆ ಡಾಕ್ಟರನ್ನು ಹುಡುಕಿಕೊಂಡು ಹೋಗಿರಬಹುದು ಎಂದೆಂದುಕೊಂಡೆ. ಆವರೆ ನನ್ನ ಅಸಿಸ್ಟೆಂಟ್ ಒಂದು ದಿನ ಹೊಸ ವಿಚಾರ ತಿಳಿಸಿದ. ಈ ವಿಚಾರಗಳು ಸಾಮಾನ್ಯವಾಗಿ ನಮಗಿಂತ ಮೊದಲು ಅವರಿಗೇ ತಿಳಿಯುವುದು, ವಪುಷ್ಟೆ ಈ ಬಡಾವಣೆಯಲ್ಲಿರುವ ಒಬ್ಬ ರಾಜಕಾರಣಿಯ ಜೊತೆ ಓಡಿಹೋಗಿದ್ದಾಳೆ ಎಂಬುದು. ಆ ಸಂಗತಿಯನ್ನು ನಾನು ಮರೆತಿರಬಹುದು. ಒಂದೆರಡು ವರ್ಷಗಳೇ ಉರುಳಿರಬಹುದು ಜನಮೇಜಯರಾಯ ನನ್ನಲ್ಲಿಗೆ ಬಂದ . ಒಳಗೆ ಯಾವ ಭಾವನೆ ಇದ್ದರೂ ಹೊರಗೆ ನಿರ್ಲಿಪ್ತ. ನಾನು ಹಳೆಯ ಗಾಯ ಕರೆದು ರಕ್ತ ಸೂಸುವ ಕೆಲಸಕ್ಕೆ ಕೈ ಹಾಕಲಿಲ್ಲ. ಮುಂದೊಂದು ದಿನ ಆವನಿಗೆ ಓರ್ವ ಹೊಸ ಹೆಂಡತಿ, ಅವಳಿಗೊಂದು ಮಗು, ಬಳಿಕ ಹಿಂದಿನ ಆ ಹೆಣ್ಣು ಮಕ್ಕಳು, ಆ ಮಕ್ಕಳಿಗೂ ಮದುವೆ ಆಗಿ ಅವರ ಮಕ್ಕಳು ಆದರೆ ಒಂದು ದಿನವೂ ವಪುಷ್ಟೆಯ ಬಗ್ಗೆ ಚಕಾರ ಇಲ್ಲ.

ಯಾಕೆ ಇಂದು ಈ ಸಮಯ ಈ ಜನಮೇಜಯ ನೆನಪು!

ನಿನ್ನೆಯ ಸಂಜೆ ಎಂದಿನಂತೆ ವಾಕಿಂಗ್ ಸಮಯ ಆ ಸ್ಥಳಕ್ಕೆ ಬಂದಾಗ ಆ ಗಂಡು ನಾಯಿ ಯಾಕೋ ಬಹಳ ವಿಚಲಿತವಾದಂತಿತ್ತು. ಕಿವಿ ನಿಮಿರಿಸಿ ಯಾವುದೋ ದಿಕ್ಕಿನತ್ತ ನೋಡುತ್ತಿತ್ತು. ನಾಲ್ಕು ಹೆಜ್ಜೆ ಆ ಕಡೆಗೆ ಓಡಿ ಮರಳಿ ತಾನಿದ್ದಲ್ಲಿಗೆ, ಮರಿಗಳಿದ್ದಲ್ಲಿಗೆ ಓಡಾಡುತ್ತಿತ್ತು. ಆದರ ವಿರುದ್ಧ ದಿಕ್ಕಿನಲ್ಲಿ ಸಾಕಷ್ಟು ಬಲಿತ, ಸಂಪೂರ್ಣ ಪ್ರೌಢವಲ್ಲದ ಹುಡುಗಾಟದ ನಾಯಿಯೊಂದು ಹಲ್ಲು ಕಿರಿದು ಈ ಮರಿಗಳಿಗೆ ಆಹ್ವಾನ ನೀಡುತ್ತಿತ್ತು. ಅದನ್ನು ಅಟ್ಟಲೋ, ಅಥವಾ ತನ್ನ ಮರಿಗಳನ್ನು ಆ ಕಡೆಗೆ ಹೋಗದಂತೆ ತಡೆಯಲೋ ಈ ಗಂಡುನಾಯಿಗೆ ಆಗುತ್ತಿರಲಿಲ್ಲ. ವಿರುದ್ಧ ದಿಕ್ಕಿನಲ್ಲಿ ಹಲವಾರು ನಾಯಿಗಳ ಗುರುಗಾಟ. ಕಿರುಚಾಟ ಅದನ್ನು ಆ ಕಡೆಗೆ ಸೆಳೆಯುತ್ತಿತ್ತು. ಆ ಕಡೆಕಂಡಾಯಿತು. ಆ ಕಡೆಯಲ್ಲಿ ಏನಿರಬಹುದು ಎಂಬ ಕುತೂಹಲದಿಂದ ನಾವಿಬ್ಬರು ಇಂದಿನ ಪಥ ಬದಲಿಸಿದೆವು. ಕ್ಯಾಂಟೀನ್ ದಾಟಿ ಮುಂದಿನ ದೊಡ್ಡ ಮೈದಾನ ಹತ್ತಿರ ಬಂದಾಗ ಅಲ್ಲಿ ಆರೆಂಟು ನಾಯಿಗಳು ಅವುಗಳ ಮಧ್ಯೆ ಕಪ್ಪು ಬಿಳುಪು ಮಚ್ಚೆಯ ಹೆಣ್ಣುನಾಯಿ, ಇನ್ನೊಂದು ಧಡೂತಿ ಅಲ್ಸೇಶಿಯನ್ ಗಂಡು ನಾಯಿಯೊಡನೆ ಬೆರೆತಿತ್ತು. ಈಗ ಅರ್ಥವಾಗುತ್ತದೆ ಆ ಗಂಡು ನಾಯಿಯ ಪರದಾಟ. ಇತ್ತ ಮರಿಗಳ ರಕ್ಷಣೆ ಅತ್ತ ಮನದನ್ನೆ ಇನ್ನೊಂದು ಗಂಡಿನೊಡನೆ ರಮಿಸುತ್ತಿದೆ.

ನಾವಿಬ್ಬರೂ ವಿಚಲಿತರಾಗಲಿಲ್ಲ. ಆದರೆ ಪ್ರಾಣಿ ಜಗತ್ತಿನ ವೈಚಿತ್ರ್ಯ ನಮ್ಮನ್ನು ಮೂಕರನ್ನಾಗಿಸುತ್ತದೆ.

ಇಂದು ಸಂಜೆ ಎಂದಿನಂತೆ ನಾವು ವಾಕಿಂಗ್‌ಗೆ ಹೊರಟಿದ್ದೆವು. ನಿನ್ನೆಯ ವಿಚಾರ ಮರೆತುಹೋಗಿತ್ತು. ಇನ್ನೇನೋ ಹರಟೆ. ಆದರೆ ಆ ಸ್ಥಳಕ್ಕೆ ಬರುವಾಗ ಇಂದೂ ನಿನ್ನೆಯ ನೋಟನೇ. ಆದರೆ ದಿಕ್ಕು ಮಾತ್ರ ಬದಲಾಗಿದೆ. ಅದರ ಪರದಾಟ ನಿನ್ನೆಗಿಂತ ವಿಪರೀತವಾಗಿದೆ. ಬರೇ ನಾಲ್ಕು ಹೆಜ್ಜೆಯಲ್ಲಿ ಒಂದು ನೂರಡಿ ಆ ಕಡೆಗೆ ಈ ಕಡೆಗೆ ಓಡಾಡುತ್ತಿದೆ. ಜೊತೆಯಲ್ಲಿ ಗುರುಗಾಟ, ಕೂಗಾಟ, ವಿಷಯ ಏನೆಂದು ತಿಳಿದಿದ್ದ ನಾವು ಎಂದುನಂತೆ ಮುಂದೆ ಹೊರಟು ಒಂದರ್ಧ ಗಂಟೆಯ ಬಳಿಕ ಹಿಂದೆ ಬರುವಾಗ ಆ ಸ್ಥಳದಲ್ಲಿ ಜನ ಜಂಗುಳಿ ಸೇರಿತ್ತು.

"ಯಾಕೆ ಅಷ್ಟೊಂದು ಜನ ಸೇರಿದ್ದಾರೆ ಅಲ್ಲಿ? ಏನು ಗಲಾಟೆ?" ಶ್ರಿಕಂಠಯ್ಯನವರು ದೂರದಿಂದಲೇ ಕೇಳಿದಾಗ ಯಾರೋ ಒಬ್ಬ

"ಸಾರ್, ಆ ಕಡೆ ಹೋಗ್ಬೇಡಿ ಹುಚ್ಚುನಾಯಿ ಇದೆ ಅಲ್ಲಿ. ದೊಣ್ಣೆತೊಗೊಂಡು ಸಾಯ್ಸೊಕೆ ನೋಡ್ತಿದ್ದಾರೆ. ಅದು ಕಚ್ಚೋಕೆ ಬರ್ತಾ ಇದೆ"

ತಕ್ಷಣ ನನಗೆ ತಿಳಿಯುತ್ತದೆ; ಇದು ಬೇರಾವ ನಾಯಿಯೂ ಅಲ್ಲ. ಏಳೆಂಟು ತಿಂಗಳಿಂದಲೂ ನಾವು ವೀಕ್ಷಿಸುತ್ತಿದ್ದ ಆ ಪುಟ್ಟ ಪರಿವಾರದ ಯಜಮಾನ ಎಂದು. ಒಂದು ಕಡೆ ಮಕ್ಕಳು ಮತ್ತೊಂದು ಕಡೆ ಮನದನ್ನೆಯನ್ನು ಕಣ್ಣಮುಂದೆಯೇ ಕಳೆದುಕೊಳ್ಳುವ ಜಂಜಾಟ ಉದ್ವೇಗದಲ್ಲಿ ಅದರ ಸ್ವಾಸ್ಥ್ಯ ಕಳೆದುಕೊಂಡಿದೆ ಎಂಬುದು ನಮಗಿಬ್ಬರಿಗೆ ಮಾತ್ರ ತಿಳಿದಿದೆ.

"ಅದು ಹುಚ್ಚುನಾಯಿ ಅಲ್ಲ. ಕೊಲ್ಬೇಡಿ, ಪ್ಲೀಸ್ ಪ್ಲೀಸ್" ಎಂದು ನಾವಿಬ್ಬರೂ ಆ ಕರೆಗೆ ಓಡುತ್ತೇವೆ.

ಅಷ್ಟರಲ್ಲಿ ತಲೆ ಓಡು ಒಡೆದು ಬಾಯಿಯಿಂದ ರಕ್ತ ಕಾರುತ್ತಾ ಬಿದ್ದ ಕಂದು ಮಚ್ಚೆಯ ಆ ಗಂಡು ನಾಯಿಯ ಬುರುಡೆಯ ಮೇಲೆ ಯಾರೋ ಹೆಮ್ಮೆಯಿಂದ ಕೋಲೂರಿ ನಿಂತಿದ್ದ.

## ನಮ್ಮ ಕಾರ್ಯಕ್ರಮಗಳ ವರದಿ

# ರಾಜಧಾನಿಯಲ್ಲಿ ಕಾರಂತರ ನೆನಪು

### 'ನಡೆದಾಡುವ ವಿಶ್ವಕೋಶ' ಶಿವರಾಮ ಕಾರಂತರ 106ನೇ ಹುಟ್ಟುಹಬ್ಬ

ಅಲ್ಲಿ ಶಿವರಾಮ ಕಾರಂತರು ಇರಲಿಲ್ಲ. ಆದರೂ, ಅವರ ಜೀವನ, ಬಹುಮುಖಿ ಪ್ರತಿಭೆ, ವ್ಯಕ್ತಿತ್ವ ಎಲ್ಲವೂ ನೆರೆದಿದ್ದ ಸಭಿಕರಿಗೆ ಸರಳವಾಗಿ ಪರಿಚಯ ವಾಗುತ್ತಿತ್ತು. ನ್ಯಾಯವಾದಿ ಹಾಗೂ ಸಾಹಿತಿ ಕೆ.ಪಿ. ಬಾಲಸುಬ್ರಹ್ಮಣ್ಯ ಕಂಜರ್ಪಣೆ, ಸಾಹಿತಿ ಪ್ರೊ।ರಾಘವೇಂದ್ರ ಪಾಟೀಲ, ಕಾರಂತರ ಪುತ್ರಿ ಕ್ಷಮಾರಾವ್ ಎಲ್ಲರೂ ತಮ್ಮ ಮಾತುಗಳಲ್ಲಿ ಕಾರಂತರನ್ನು ಪರಿಚಯಿಸಿದರು. ಭಾನುವಾರ ನಗರದ ತರಳಬಾಳು ಕೇಂದ್ರದಲ್ಲಿ ಆಯೋಜಿಸಿದ್ದ ಶಿವರಾಮ ಕಾರಂತರ 106ನೇ ಹುಟ್ಟುಹಬ್ಬದಲ್ಲಿ ಕಾರಂತರ ನೆನಪು ಪಡಿಮೂಡಿತು. ಕಾರಂತರ ಸಾಧನೆಯನ್ನು ಸಾಹಿತಿಗಳ ಮಾತಲ್ಲೇ ಕೇಳುವುದಾದರೆ...

**ಬಾಲಸುಬ್ರಹ್ಮಣ್ಯ ಕಂಜರ್ಪಣೆ** : ಕಾರಂತರು ತಾವು ಬೆಳೆಯುತ್ತಿದ್ದ ಎಲ್ಲಾ ಕ್ಷೇತ್ರಗಳ ಸೀಮೆಯನ್ನು ವಿಸ್ತರಿಸುತ್ತಾ ಸಾಗಿದರು. ಸಾಹಿತ್ಯ, ಯಕ್ಷಗಾನ ಸೇರಿದಂತೆ ಎಲ್ಲಾ ಕ್ಷೇತ್ರಗಳ ಗಡಿಯನ್ನು ವಿಸ್ತರಿಸಿದರು. ಬದುಕಿಗಿಂತ ಬರಹ ದೊಡ್ಡದಲ್ಲ. ಅದು ಬದುಕಿನ ಒಂದು ಭಾಗ ಎಂಬಂತೆ ಬದುಕಿದರು. ಸಾಂಸ್ಕೃತಿಕವಾಗಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತಾ ಸಾಗಿದರು. ಜೊತೆಯಾಗಿ ಹತ್ತೂರಲ್ಲಿ ಒಂದೂರಾಗಿದ್ದ ಪುತ್ತೂರಿಗೆ ಸಾಂಸ್ಕೃತಿಕ ಮಹತ್ವ ತಂದುಕೊಟ್ಟರು.

ಕಾರಂತರದು ವಾಸ್ತವದ ನೆಲೆಯಲ್ಲಿ ಆದರ್ಶದತ್ತ ಹೆಜ್ಜೆ ಹಾಕುವ ವ್ಯಕ್ತಿತ್ವ. ಅದು ತಮಗನ್ನಿಸಿದ್ದನ್ನು ಬರೆದಿದ್ದಾರೆ. ಬರೆದದ್ದನ್ನು ಬೇರೆಯವರು ಒಪ್ಪಿಕೊಳ್ಳುವ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಇದು ಅವರ ದಾರ್ಷ್ಟ್ಯವಾಗಿರದೆ, ಆತ್ಮವಿಶ್ವಾಸವಾಗಿತ್ತು.

**ರಾಘವೇಂದ್ರ ಪಾಟೀಲ** : ಕಾರಂತರ ಸಾಮಾಜಿಕ ವ್ಯಕ್ತಿತ್ವ ಪ್ರಾರಂಭವಾಗುವುದೇ ರಾಜಕಾರಣದಿಂದ. ಪ್ರಾರಂಭದಲ್ಲಿ ಮಹಾತ್ಮ ಗಾಂಧಿ ಅವರಿಂದ ಪ್ರಭಾವಿತರಾಗಿ ಖಾದಿ ಪ್ರಚಾರಕ್ಕೆ ಇಳಿದರು. ನಂತರ ಕಾಂಗ್ರೆಸ್ ನಿಧಿ ಸಂಗ್ರಹಕ್ಕೆ ಕಾಲ್ನಡಿಗೆ ನಡೆಸಿದ್ದರು. ಆದರೆ ಅವಕಾಶವಾದಿ ರಾಜಕಾರಣಿಗಳಿಗೆ ನಿಷ್ಠುರಿಯಾಗಿದ್ದರು.

ಕಾರಂತರ ನಿತ್ಯ ಚಟುವಟಿಕೆಯ ಕಾಳಜಿ ಕೇಂದ್ರ ಕನ್ನಡ ಸಂಸ್ಕೃತಿ. ಗಾಂಧಿಯವರ ಸತ್ಯಾನ್ವೇಷಣೆಯಂತೆ ಕಾರಂತರು ಪ್ರಯೋಗಕ್ಕೆ ಒಳಗಾದರು. ಇದರ ಫಲವೇ ಸಾಲ, ಕಷ್ಟ ನಷ್ಟ ಹಾಗೂ ನಿರಾಶೆಗಳು. ಈ ಯಾವ ಹಂತವಲ್ಲೂ ತಮ್ಮ ಪ್ರಯೋಗದಿಂದ ಹಿಂತೆಗೆಯದೆ ಮುನ್ನಡೆದರು. ಕಾರಂತರ ಪ್ರತಿ ಮಾತು ಅನುಭವದ ಸತ್ಯದ ಅಂಶಗಳಾಗಿದ್ದವು. ಅವರಲ್ಲಿ ಬದುಕನ್ನು ಸಮಕಾಲೀನಗೊಳಿಸಬೇಕೆಂಬ ತಾತ್ವಿಕ ತುಡಿತವಿತ್ತು.

ಕಾರ್ಯಕ್ರಮವನ್ನು ಕಾರಂತರ ಪುತ್ರಿ ಒಡಿಸ್ಸಿ ನೃತ್ಯ ಕಲಾವಿದೆ ಕ್ಷಮಾರಾವ್ ಉದ್ಘಾಟಿಸಿದರು. ತಮ್ಮ ತಂದೆ ಪರಿಸರದೊಂದಿಗೆ ಮಕ್ಕಳನ್ನು ಬೆಳೆಸಿದ ಬಗೆಯನ್ನು ಈ ಸಂದರ್ಭದಲ್ಲಿ ಮೆಲುಕು ಹಾಕಿದರು.

ಕಾರ್ಯಕ್ರಮವನ್ನು ಶಿವರಾಮ ಕಾರಂತ ವೇದಿಕೆ ಆಯೋಜಿಸಿತ್ತು. ವೇದಿಕೆಯ ಅಧ್ಯಕ್ಷೆ ಪ್ರೇಮಾಭಟ್ ಉಪಸ್ಥಿತರಿದ್ದರು.

**(ಕನ್ನಡಪ್ರಭ 15 ಅಕ್ಟೋಬರ್)**

## ಅಪ್ಪನನ್ನು ನೆನಪಿಸಿಕೊಂಡ ಮಗಳು

# ಕಾರಂತರ ಬದುಕೇ ವರ್ಣಮಯ ಕ್ಯಾನ್‌ವಾಸ್

'ನನ್ನ ತಂದೆಯ (ಶಿವರಾಮ ಕಾರಂತ) ಜೀವನ, ಶತಮಾನದ ಉದ್ದಕ್ಕೂ ಹರಡಿದ ಒಂದು ವರ್ಣರಂಜಿತ ಕ್ಯಾನ್‌ವಾಸ್. ಅದನ್ನು ಕೆಲವೇ ಕ್ಷಣಗಳಲ್ಲಿ ವಿವರಿಸಿ ಹೇಳುವುದು ಯಾರಿಗೂ ಸಾಧ್ಯವಿಲ್ಲದ ಕೆಲಸ' ಇದು ಕಾರಂತರ ಪುತ್ರಿ, ಒಡಿಸ್ಸಿ ನೃತ್ಯ ಕಲಾವಿದೆ ಕ್ಷಮಾರಾವ್ ತಮ್ಮ ತಂದೆಯ ಕುರಿತು ಅಭಿಮಾನದಿಂದ ನುಡಿದ ಮಾತು.

ಇಲ್ಲಿನ ಶಿವರಾಮ ಕಾರಂತ ವೇದಿಕೆ ಮತ್ತು ಆರ್.ಟಿ.ನಗರದ ತರಳಬಾಳು ಕೇಂದ್ರದ ವತಿಯಿಂದ ಭಾನುವಾರ ಆಯೋಜಿಸಿದ್ದ 'ಶಿವರಾಮ ಕಾರಂತರ 106ನೇ ಹುಟ್ಟುಹಬ್ಬ' ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಅವರು, ತಂದೆ, ತಾಯಿಯರ ಜತೆಗಿನ ಅತ್ಯಂತ ಸಂತಸದ ಕ್ಷಣಗಳನ್ನು ಎಳೆ ಎಳೆಯಾಗಿ ಬಿಡಿಸಿಟ್ಟರು.

'ಅಪ್ಪನಿಗೆ ಭವಿಷ್ಯದ 50 ವರ್ಷಗಳ ಬದುಕನ್ನು ಸೃಷ್ಟಿಸುವ ತವಕವಿತ್ತು. ಆದ್ದರಿಂದ ಅವರು ತಮ್ಮ ಬದುಕನ್ನು ಸದಾ ಪ್ರಯೋಗಗಳಿಂದ ಒಡ್ಡಿಕೊಳ್ಳುತ್ತಲೇ ಸಾಗಿದರು. ಅವರ ಪ್ರಯೋಗಗಳು ನಮ್ಮ ಮೇಲೂ ನಡೆದವು. ಸಮಾಜದ ಹಲವಾರು ಟೀಕಿಸಿದರೂ, ಯಾವುದಕ್ಕೂ ಧೃತಿಗೆಡದೆ ಮುನ್ನಡೆದ ಅವರು ಕನ್ನಡದ ಸಾಂಸ್ಕೃತಿಕ ಚರಿತ್ರೆಯ ಮೇರು ಪರ್ವತವಾದರು' ಎಂದು ಕ್ಷಮಾರಾವ್ ಹೇಳಿದರು.

'ಪರಿಸರ ಸಂರಕ್ಷಣೆ ಈಗಿನ ಹಲವರಿಗೆ ಒಂದು ಶೋಕಿಯ ಕೆಲಸ. ಆದರೆ ಕಾರಂತರಿಗೆ ಅದು ಒಡಲಾಳದ ಆಸಕ್ತಿಯ ಕರ್ತವ್ಯವಾಗಿತ್ತು. ಪ್ರಕೃತಿಯಲ್ಲಿನ ವ್ಯವಸ್ಥೆಗೆ ತೊಂದರೆ ಮಾಡದೆ, ಅದರ ಸೊಬಗನ್ನು ಅನುಭವಿಸುವುದು ಅವರ ಪರಿಸರವಾದ. ಆದ್ದರಿಂದಲೇ ಅವರು ಸದಾ ನಿಸರ್ಗದ ಜತೆ ಸಂವಾದಿಸುತ್ತ ಬದುಕಿದರು' ಎಂದು ಕಾರಂತರ ಬಗೆಗಿನ ಕುತೂಹಲಕಾರಿ ಸಂಗತಿಗಳನ್ನು ಮುಂದಿಟ್ಟರು.

'ಅಪ್ಪ ಮತ್ತು ಅಮ್ಮ (ಲೀಲಾ ಕಾರಂತ) ಇಬ್ಬರೂ ಕಲಾವಿದರೇ ಆಗಿದ್ದರು. ನಾನು ಕೂಡಾ ಅಪ್ಪನ ಆ ನಾಟಕಗಳಲ್ಲಿ ಪಾತ್ರ ಮಾಡುತ್ತಿದ್ದೆ. ಅವರೊಳಗೆ ಒಂದು ಅದ್ಭುತ ಎಂಬಂತಹ ಸಂವೇದನಾಶೀಲತೆ ಇತ್ತು. ಅವರ ಹೃದಯ ಶ್ರೀಮಂತಿಕೆಯೇ ಹಲವು ಜನರಿಗೆ ಹೊಸ ಬದುಕನ್ನು ಕೊಟ್ಟಿತ್ತು. ನಮ್ಮ ಬದುಕಿಗೂ ಅವರ ಔದಾರ್ಯ ಮತ್ತು ಅನುಕಂಪವೇ ಆಸರೆ' ಎಂದು ಕ್ಷಮಾರಾವ್ ತಂದೆ ಮತ್ತು ತಾಯಿಯನ್ನು ನೆನೆದರು.

ಪುತ್ತೂರಿನ ಪರಿಸರದಲ್ಲಿ 'ಬಾಲವನದ ಕಾರಂತ' ಮತ್ತು 'ಬಾಲವನದ ಅಮ್ಮ' ಎಂದು ಖ್ಯಾತರಾಗಿದ್ದ ಅವರ ಜೀವನದ ಮೌಲ್ಯಗಳು ಎಲ್ಲರಿಗೂ ಆದರ್ಶಪ್ರಾಯವಾಗಿವೆ. ನುಡಿದಂತೆ ಬದುಕಿದ ಮಹನೀಯರು ಅವರು. ಸಾಹಿತ್ಯದ ಆಚೆಗೂ ಸಂಸ್ಕೃತಿಯ ಹೊಳಹುಗಳಿವೆ ಎಂಬುದನ್ನು ಶೋಧಿಸಿ, ಪ್ರಚುರಪಡಿಸುತ್ತ ಸಾಗಿದ ಅವರು ಈ ನಾಡಿನ ಒಬ್ಬ ಮಹಾನ್ ಪುತ್ರ ಎಂದರು.

ವಕೀಲ, ಸಾಹಿತಿ ಕೆ.ಪಿ.ಬಾಲಸುಬ್ರಹ್ಮಣ್ಯ ಕಂಜರ್ಪಣೆ ಮಾತನಾಡಿ, 'ಈ ನಾಡಿನ ಅನೇಕರು ತಿಳಿದೋ, ತಿಳಿಯದೆಯೋ ಕಾರಂತರ ವ್ಯಕ್ತಿತ್ವದಿಂದ ಪ್ರಭಾವಿತರಾಗಿದ್ದಾರೆ. ಬದುಕಿಗಿಂತ ದೊಡ್ಡದು ಬರಹವಲ್ಲ, ಅದು ಬದುಕಿನ ಒಂದು ಅನುಭೂತಿಯಷ್ಟೇ ಎಂದು ಬದುಕಿದವರು ನಮ್ಮ ಕಾರಂತರು' ಎಂದರು.

ಎಲ್ಲರೂ ಯಾವುದೋ ಒಂದು ಕೆಲಸಕ್ಕಾಗಿ ಚೌಕಟ್ಟುಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಆದರೆ ಕಾರಂತರು, ಚೌಕಟ್ಟುಗಳಿರುವುದು ಮೀರುವುದಕ್ಕೆ ಎಂದು ನಂಬಿದ್ದರು. ಅಂತೆಯೇ ಬದುಕಿದರು. ಅನುಭವಿಸಿದ್ದನ್ನು

ಬರೆದವರು. ಯಾರ ಒತ್ತಡಕ್ಕೂ ಮಣಿಯದೆ, ತಮ್ಮ ಮನಸ್ಸು ಹೇಳಿದಂತೆ ನಡೆದ ಧೀಮಂತ ವ್ಯಕ್ತಿತ್ವ ಅವರದ್ದು ಎಂದರು.

ಸಾಹಿತಿ ಪ್ರೊ. ರಾಘವೇಂದ್ರ ಪಾಟೀಲ ಮಾತನಾಡಿ, ಪರಂಪರೆಯ ಬೇರುಗಳನ್ನು ಮತ್ತೆ ಮತ್ತೆ ಶೋಧಿಸುವ ಹಂಬಲ ಕಾರಂತರಲ್ಲಿ ಸದಾ ತುಡಿಯುತ್ತಿತ್ತು. ಕನ್ನಡ ಸಾಹಿತ್ಯ ರಚನೆಯಲ್ಲಿ ಹೊಸ ಶೈಲಿಯ ಭಾಷೆಯನ್ನು ಪರಿಚಯಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಕನ್ನಡ ಭಾಷೆಯ ಪುನರುತ್ಥಾನ ಚಳವಳಿಯಲ್ಲಿ ಅವರ ಕೊಡುಗೆ ಮಹತ್ವಪೂರ್ಣವಾದುದು ಎಂದರು.

ಈ ರಾಷ್ಟ್ರದಲ್ಲಿ ಮಹಾತ್ಮ ಗಾಂಧಿ ಮತ್ತು ಶಿವರಾಮ ಕಾರಂತರು ಮಾತ್ರ ತಮ್ಮ ಜೀವನವನ್ನು ಮಹತ್ವಪೂರ್ಣ ಪ್ರಯೋಗಗಳಿಗೆ ಒಡ್ಡಿಕೊಂಡರು. ಕಾರಂತರ ಪ್ರಯೋಗಗಳು ಸಾಮಾಜಿಕ ಸಾಫಲ್ಯದ ನೆಲೆಯಲ್ಲಿ ಮೂಡಿ ಬರುತ್ತಿದ್ದವು ಎಂದರು. ಶಿವರಾಮ ಕಾರಂತ ವೇದಿಕೆಯ ಅಧ್ಯಕ್ಷೆ ಡಾ.ಪ್ರೇಮಾಭಟ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ವೇದಿಕೆಯ ಸದಸ್ಯ ಬಿ.ವಿ.ಕೆದಿಲಾಯ ಸ್ವಾಗತಿಸಿದರು.

(ಪ್ರಜಾವಾಣಿ 15 ಅಕ್ಟೋಬರ್)

## ಮತ್ತೊಬ್ಬರ ಅಭಿಪ್ರಾಯ ಗೌರವಿಸುತ್ತಿದ್ದ ಕಾರಂತರು

'ಶಿವರಾಮ ಕಾರಂತರು ತಮಗೆ ಇಷ್ಟವಾದುದನ್ನು ಇನ್ನೊಬ್ಬರ ಮೇಲೆ ಹೇರುತ್ತಿರಲಿಲ್ಲ. ಬದಲಾಗಿ ಮತ್ತೊಬ್ಬರ ಇಷ್ಟಕ್ಕೆ ತಕ್ಕಂತೆ ನಡೆದುಕೊಳ್ಳುತ್ತಿದ್ದರು.'

ಈ ಮಾತನ್ನು ಹೇಳಿದವರು ಕಾರಂತರ ಪುತ್ರಿ, ಖ್ಯಾತ ಒಡಿಸ್ಸಿ ನೃತ್ಯ ಕಲಾವಿದೆ ಕ್ಷಮಾರಾವ್.

ನಗರದ ತರಳಬಾಳು ಕೇಂದ್ರದಲ್ಲಿ ಶಿವರಾಮ ಕಾರಂತ ವೇದಿಕೆ ಭಾನುವಾರ ಆಯೋಜಿಸಿದ್ದ 'ಶಿವರಾಮ ಕಾರಂತರ 106ನೇ ಹುಟ್ಟುಹಬ್ಬ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಕಾರಂತರು ತಮಗೆ ಬೇರೆ ನೃತ್ಯ ಪ್ರಕಾರಗಳನ್ನು ಕಲಿಯುವಂತೆ ಹೇಳುತ್ತಿದ್ದರು. ಆದರೆ, ಅದು ತನಗೆ ಹೊಂದದೆ ವಿಫಲಳಾದಾಗ 'ನಿನಗೆ ಯಾವ ತರಹದ ನೃತ್ಯ ಇಷ್ಟವೋ ಅದರಲ್ಲೇ ಸಾಧನೆ ಮಾಡು' ಎಂದು ಪ್ರೇರೇಪಿಸಿದರು. ಆ ಪ್ರೇರಣೆಯಿಂದಲೇ ತಮಗೆ ಒಡಿಸ್ಸಿ ನೃತ್ಯದಲ್ಲಿ ಕೊಂಚ ಸಾಧನೆ ಮಾಡಲು ಸಾಧ್ಯವಾಯಿತು ಎಂದು ತಿಳಿಸಿದರು.

ತಂದೆ-ತಾಯಿ ನಡೆಸುತ್ತಿದ್ದ ಶಿಸ್ತುಬದ್ಧ ಜೀವನವೇ ನಮಗೆ ಮಾರ್ಗದರ್ಶನ ಎಂದ ಅವರು, ಸೋದರ ಉಲ್ಲಾಸ ಕಾರಂತರ ಸಾಧನೆಯ ಬಗ್ಗೆಯೂ ಮೆಚ್ಚುಗೆ ವ್ಯಕ್ತಪಡಿಸಿದ ಕ್ಷಮಾರಾವ್, ಅಪ್ಪ ಇದ್ದಿದ್ದರೆ ಈ ಸಂತೋಷ ಇನ್ನೂ ಹೆಚ್ಚುತ್ತಿತ್ತು ಎಂದು ಕಾರಂತರನ್ನು ಜ್ಞಾಪಿಸಿಕೊಂಡರು.

ವಕೀಲ ಕೆ.ಪಿ.ಬಾಲಸುಬ್ರಹ್ಮಣ್ಯ ಕಂಜರ್ಪಣೆ ಮಾತನಾಡಿ, ಕಾರಂತರು ಬಹುಮುಖಿ ವ್ಯಕ್ತಿತ್ವ ಹೊಂದಿದ್ದರೂ, ಬದುಕನ್ನು ಎಂದೂ ಕಡೆಗಣಿಸಲಿಲ್ಲ. ಸಾಹಿತ್ಯ ಕೇವಲ ಬದುಕಿನ ಒಂದು ಅಂಗ ಎಂದು ಭಾವಿಸಿದ್ದರು. ಅವರು ದೈವಾಂಶವನ್ನು ಮೆಚ್ಚದೆ ವಾಸ್ತವದ ನೆಲೆಗಟ್ಟಿನ ಮೇಲೆ ಬದುಕಿದವರು.

ಎಲ್ಲರೊಳಗೆ ತಾನೂ ಒಬ್ಬ ಎಂದು ಜೀವನ ಸಾಗಿಸಿದ ಸರಳವಾದಿ ಎಂದು ಕಾರಂತರು ನಡೆಸಿದ ಹಾದಿಯನ್ನು ವಿವರಿಸಿದರು. ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಪುರಸ್ಕೃತ ಪ್ರೊ.ರಾಘವೇಂದ್ರ ಪಾಟೀಲ ಉಪಸ್ಥಿತರಿದ್ದರು.

(ಟೈಮ್ಸ್ ಆಫ್ ಇಂಡಿಯಾ, 15 ಅಕ್ಟೋಬರ್)

# ಶಿವರಾಮ ಕಾರಂತ ವೇದಿಕೆ(ರಿ)



"ಆದರ್ಶ" 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್ ನಗರ
ಬೆಂಗಳೂರು – 560032.

ದೂರವಾಣಿ: 23336822/9343766994

## 2006-07 ರ ವರದಿ

ಮಾನ್ಯ ಅಧ್ಯಕ್ಷರೇ, ಗೌರವಾನ್ವಿತ ಸದಸ್ಯರೇ,

ಕನ್ನಡ ಸಾಹಿತ್ಯ, ಭಾಷೆ ಹಾಗೂ ಭಾರತೀಯ ಸಂಸ್ಕೃತಿಗಳ ಬಗ್ಗೆ ಜನಮನದಲ್ಲಿ ಅರಿವನ್ನು ಬೆಳೆಸುವ ಸದುದ್ದೇಶದಿಂದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ಕನ್ನಡ ಸಾಹಿತ್ಯ ದಿಗ್ಗಜ ಡಾ. ಶಿವರಾಮ ಕಾರಂತರ ಬದುಕು ಬರಹಗಳು ನೀಡಿದ ಸ್ಫೂರ್ತಿಯಿಂದ ನಮ್ಮ ಸಂಸ್ಥೆಯು 1993ರಲ್ಲಿ ಸ್ಥಾಪನೆಯಾಯಿತು. ಕನ್ನಡದ ಪ್ರಾಚೀನವೂ, ಶ್ರೀಮಂತವೂ ಆದ ಸಾಹಿತ್ಯ ಸಂಪತ್ತಿನ ಅರಿವು ಪ್ರೀತಿ, ಅಭಿಮಾನಗಳನ್ನು ಜನರಲ್ಲಿ ಬೆಳೆಸುವ ಉದ್ದೇಶದಿಂದ ನಮ್ಮ ಸಂಸ್ಥೆ ಕಳೆದ 14 ವರ್ಷಗಳಿಂದ ಅವ್ಯಾಹತವಾಗಿ ಪ್ರತಿ ತಿಂಗಳೂಉಪನ್ಯಾಸ/ವ್ಯಾಸಂಗಗೋಷ್ಠಿ/ಕವಿಗೋಷ್ಠಿ/ಗಮಕವಾಚನ/ಸಂಗೀತ/ನಾಟಕ/ಯಕ್ಷಗಾನ/ಸಾಹಿತ್ಯ ಅಧ್ಯಯನ ಶಿಬಿರಗಳ ಮೂಲಕ ಬೆಂಗಳೂರಿನ ಉತ್ತರ ಭಾಗದ ಜನರಲ್ಲಿ ಮಾತ್ರವಲ್ಲ 1.11.2003ರಲ್ಲಿ ಸ್ಥಾಪಿಸಿದ ಸಾಸ್ತಾನ ಅಂಗ ಶಾಖೆಯ ಮೂಲಕವೂ ಉಡುಪಿ, ಧಾರವಾಡ, ಮೈಸೂರುಗಳಲ್ಲಿ ಕಾರ್ಯಕ್ರಮಗಳನ್ನು ನಡೆಸುವ ಮೂಲಕವೂ ಇನ್ನಿತರ ಪ್ರದೇಶಗಳಲ್ಲೂ ಕನ್ನಡದ ಬಾವುಟವನ್ನು ಏರಿಸುವ ನಮ್ಮ ಕನಸನ್ನು ನೆನಸಾಗಿ ಮಾಡುವ ಪ್ರಯತ್ನದಲ್ಲಿ ಆಂಶಿಕ ಯಶಸ್ಸನ್ನು ಗಳಿಸಿದ್ದೇವೆ ಎಂದು ವಿನಯಪೂರ್ವಕವಾಗಿ ಹೇಳಬಯಸುತ್ತೇವೆ. 31.03.2007ಕ್ಕೆ ಮುಕ್ತಾಯಗೊಂಡ ಆರ್ಥಿಕ ವರ್ಷದ ವರದಿಯನ್ನು ತಮ್ಮ ಮುಂದಿರಿಸಲು ನನಗೆ ತುಂಬಾ ಸಂತಸವಾಗುತ್ತಿದೆ.

ವರದಿ ವರ್ಷದಲ್ಲಿ ಸಂಸ್ಥೆಯ ಚುಕ್ಕಾಣಿಯನ್ನು ಹಿಡಿಯಲು 13.08.2006ರಲ್ಲಿ ಮಹಾಸಭೆ ಮತ್ತು ತದನಂತರ ಅದೇ ದಿನ ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಈ ಕೆಳಗಿನವರನ್ನು ಅವಿರೋಧವಾಗಿ ಆಯ್ಕೆ ಮಾಡಲಾಯಿತು.

| | | |
|---|---|---|
| ಅಧ್ಯಕ್ಷರು | – | ಶ್ರೀಮತಿ ಪ್ರೇಮಾಭಟ್ |
| ಉಪಾಧ್ಯಕ್ಷರು | – | ಶ್ರೀಮತಿ ರಾಧಾ ರಾಮಸ್ವಾಮಿ |
| | | ಶ್ರೀ ಎಸ್. ಆರ್. ವಿಜಯಶಂಕರ |
| ಕಾರ್ಯದರ್ಶಿ | – | ಶ್ರೀ ಪಾ. ಚಂದ್ರಶೇಖರ ಚಡಗ |

ಸಹಕಾರ್ಯದರ್ಶಿ - ಡಾ. ಆರ್. ಆರ್. ಪಾಂಗಾಳ

ಖಜಾಂಚಿ - ಶ್ರೀ ಎ. ವಾಸುದೇವ ರಾವ್

**ಕಾರ್ಯಕಾರಿ ಸಮಿತಿಯ ಸದಸ್ಯರು**

1. ಶ್ರೀ ಬಿ.ವಿ. ಕೆದಿಲಾಯ
2. ಶ್ರೀ. ಸಾ.ದಾ. ವಾರಂಬಳ್ಳಿ
3. ಶ್ರೀ ಬಿ. ಸದಾಶಿವರಾವ್
4. ಶ್ರೀ ಹೆಚ್. ವಿ. ಶಿವಸ್ವಾಮಿ
5. ಶ್ರೀ. ಎ. ಎಸ್. ಭಟ್
6. ಶ್ರೀ. ಎ. ಆರ್. ರಾಮಯ್ಯ
7. ಶ್ರೀ ಬಿ.ಡಿ. ಶೆಣೈ
8. ಶ್ರೀ ಕೆ. ಎನ್. ಶ್ರೀಕಂಠಯ್ಯ
9. ಶ್ರೀಮತಿ ವನಜಾರಾಜನ್

ದಿನಾಂಕ 3.3.07ರಂದು ನಡೆದ ಕಾರ್ಯಕಾರಿಸಮಿತಿಯು ನಮ್ಮ ಸಂಸ್ಥೆಗೆ ಹೊಸದಾಗಿ ಸೇರ್ಪಡೆಯಾದ ಶ್ರೀಮತಿ ಶಾಂತಾಕಮಾರಿಯವರನ್ನು ಇನ್ನೊಬ್ಬ ಸಹಕಾರ್ಯದರ್ಶಿಯಾಗಿ ಆಯ್ಕೆ ಮಾಡಿಕೊಂಡಿತು. ಸ್ವತಃ ಲೇಖಕಿ ಹಾಗೂ ಸಂಘಟಕರಾದ ಶ್ರೀಮತಿ ಶಾಂತಾಕುಮಾರಿಯು ಈ ಸಂಸ್ಥೆಯನ್ನು ಮುನ್ನಡೆಸುವಲ್ಲಿ ಅಮೂಲ್ಯವಾದ ಕೊಡುಗೆಯನ್ನು ನೀಡುವರೆಂಬ ಭರವಸೆ ಕಾರ್ಯಕಾರಿ ಸಮಿತಿಗೆ ಇದೆ. ದಿನಾಂಕ 19-5-07ರಂದು ನಡೆದ ಕಾರ್ಯಕಾರಿ ಸಮಿತಿಯಲ್ಲಿ ಕನ್ನಡದ ಹಿರಿಯ ಸಾಹಿತಿ ಯು.ಆರ್.ಅನಂತಮೂರ್ತಿಯವರನ್ನು ನಮ್ಮ ಸಂಸ್ಥೆಯ ಗೌರವಾಧ್ಯಕ್ಷರಾಗಲು ಕೇಳಿಕೊಳ್ಳಬೇಕು ಹಾಗೂ ಬೆಂಗಳೂರಿನಲ್ಲಿ ಶಿವರಾಮ ಕಾರಂತ ಭವನ, ಕಾರಂತ, ಅಡಿಗರ ಹೆಸರಿನಲ್ಲಿ ಪ್ರಶಸ್ತಿ ಪ್ರದಾನ ಮುಂತಾದ ಗುರುತರ ಕಾರ್ಯಗಳನ್ನು ಕೈಗೊಳ್ಳಬೇಕೆಂಬ ಸಲಹೆಯನ್ನು ಅನುಮೋದಿಸಲಾಯಿತಾದರೂ ಈ ಮಹಾಸಭೆಯ ಒಪ್ಪಿಗೆ ಪಡೆದೇ ಈ ದಿಶೆಯಲ್ಲಿ ಮುಂದಿನ ಹೆಜ್ಜೆಗಳನ್ನು ಕೈಗೊಳ್ಳುವುದು ಉಚಿತವೆಂದು ತೀರ್ಮಾನಿಸಲಾಯಿತು.

ವರದಿ ವರ್ಷದಲ್ಲಿ ಕಾರ್ಯಕಾರಿ ಸಮಿತಿಯ ಆಗಾಗ್ಗ ಸಭೆ ಸೇರಿ ಸಂಸ್ಥೆಯ ಚಟುವಟಿಕೆಗಳನ್ನು ರೂಪಿಸಿ, ಅನುಷ್ಠಾನಗೊಳಿಸುವಲ್ಲಿ ಮಹತ್ವದ ನಿರ್ಣಯಗಳನ್ನು ಕೈಗೊಂಡಿತು.

ವರದಿ ವರ್ಷದಲ್ಲಿ ಈ ಕೆಳಗಿನ ನಾಲ್ವರು ರೂ. 5000ವನ್ನು ನೀಡಿ ನಮ್ಮ ಸಂಸ್ಥೆಯ ಪೋಷಕ ಸದಸ್ಯತ್ವವನ್ನು 2ರಿಂದ 6ಕ್ಕೆ ಏರಿಸಿದ್ದಾರೆ ಎನ್ನಲು ನಮಗೆ ಸಂತಸವಾಗುತ್ತಿದೆ.

1. ಶ್ರೀ ಎನ್. ಎಮ್. ಶಿವಕುಮಾರ್, ವಿಜಯನಗರ.

2. ಶ್ರೀ ಯು.ಆರ್. ನರಸಿಂಹಮೂರ್ತಿ, ಸುಲ್ತಾನ ಪಾಳ್ಯ

3. ಶ್ರೀ ಪಿ.ಜೆ. ಬಾಗಿಲ್ತಾಯ, ನಿವೃತ್ತ ಡಿ.ಐ.ಜಿ.ಆಫ್ ಪೋಲಿಸ್, ಇಂದಿರಾನಗರ

4 ಶ್ರೀ ಸದಾನಂದ ಮಡಿ, ಖ್ಯಾತ ಉದ್ಯಮಿ, ಬಸವನ ಗುಡಿ.

ಇದಲ್ಲದೆ 10 ಜನ ಹೊಸದಾಗಿ ರೂ. 1000ವನ್ನು ನೀಡಿ ನಮ್ಮ ಸಂಸ್ಥೆಯ ದಾನಿ ಸದಸ್ಯರಾಗಿದ್ದಾರೆ. 8 ಜನ ಅಜೀವ ಸದಸ್ಯರು ರೂ. 750ನ್ನು ನೀಡಿ ದಾನಿ ಸದಸ್ಯರಾಗಿದ್ದಾರೆ. 18ಜನ ಹೊಸದಾಗಿ ಆಜೀವ ಸದಸ್ಯರಾಗಿ ಸೇರ್ಪಡೆ ಆಗಿದ್ದಾರೆ. ನಮ್ಮ ಸಂಸ್ಥೆಯ ಜೊತೆ ಕಾರ್ಯದರ್ಶಿ ಹಾಗೂ ಖಜಾಂಚಿಯಾಗಿ ಕೆಲವು ವರ್ಷ ಕೆಲಸ ಮಾಡಿದ ಶ್ರೀ ವಿ.ಟಿ.ಎಸ್.ರಾಯರು ವರದಿ ವರ್ಷದಲ್ಲಿ ನಿಧನರಾಗಿದ್ದಾರೆ.

ನಮ್ಮ ಸಂಸ್ಥೆಯ ಸದಸ್ಯತ್ವದ ಸಂಖ್ಯೆ 31.3.07 ಮತ್ತು 31.3.06ರಲ್ಲಿ ಹೀಗಿತ್ತು

| | | 31.3.07 | | 31.3.06 |
|---|---|---|---|---|
| ಪೋಷಕ ಸದಸ್ಯರು | – | 06 | | 02 |
| ದಾನಿ ಸದಸ್ಯರು | – | 51 | | 33 |
| ಅಜೀವ ಸದಸ್ಯರು | – | 157 | | 148 |
| ಒಟ್ಟು | | 214 | ಒಟ್ಟು | 183 |

ಈ ವರ್ಷ ಸದಸ್ಯತ್ವದ ಬೆಳವಣಿಗೆ ತೃಪ್ತಿಕರವಾಗಿದೆ. ಮುಂದೆ ಈ ಸಂಸ್ಥೆಯು ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸುವಲ್ಲಿ ಸದಸ್ಯರ ಸಹಕಾರವನ್ನು ಕೋರುತ್ತೇವೆ.

ಈ ವರ್ಷ ಹಣತೆಗೆ ಜಾಹೀರಾತಿನ ಸಂಗ್ರಹ, ಕಾರ್ಯಕ್ರಮಗಳಿಗೆ ಪ್ರಾಯೋಜಕರನ್ನು ಹೊಂದಿಸುವುದು ಮತ್ತು ದೇಣಿಗೆಗಳನ್ನು ಸಂಗ್ರಹಿಸುವುದು ಈ ರೀತಿ ಎಲ್ಲಾ ನಿಟ್ಟಿನಲ್ಲೂ ಗಮನಾರ್ಹ ಪ್ರಗತಿಯನ್ನು ಸಾಧಿಸಿರುವುದನ್ನು ಈಗಾಗಲೇ ನೀವು ಕಂಡುಕೊಂಡಿರಬಹುದು. ಆದರೂ ನಾವು ಸಾಧಿಸಿರುವುದು ರವಷ್ಟು ಸಾಧಿಸಬೇಕಾಗಿರುವುದು ಬಹಳಷ್ಟು ಎನ್ನುವ ಅರಿವು ನಮಗಿದೆ.

ವರದಿ ವರ್ಷದಲ್ಲಿ ಈ ಕೆಳಗಿನ ಕಾರ್ಯಕ್ರಮಗಳನ್ನು ನಡೆಸಿದ್ದೇವೆ.

| | ದಿನಾಂಕ | ಕಾರ್ಯಕ್ರಮಗಳ ವಿವರ | ಮುಖ್ಯ ಅತಿಥಿಗಳು | ಸ್ಥಳ | ಸಹಯೋಗ |
|---|---|---|---|---|---|
| 1 | [illegible] | ಡಾ. ಆರ್. ಆರ್. ಪಾಂಗಾಳರ ವ್ಯಾಸ ಭಾರತ-ಭಿನ್ನ ವಿನ್ಯಾಸದ ಕುರಿತ ವಿಚಾರಗೋಷ್ಠಿ | [illegible]<br>[illegible]<br>ಶ್ರೀ [illegible]<br>ಪ್ರೊ. [illegible] ನರಸಿಂಹಮೂರ್ತಿ | ಭಾರತೀಯ ವಿದ್ಯಾಭವನದ ಸಭಾಂಗಣ, ಮೈಸೂರು | ಭಾರತೀಯ ವಿದ್ಯಾಭವನ ಮೈಸೂರು |
| 2 | [illegible] | ಉಪನ್ಯಾಸ<br>[illegible]<br>'ಬಾಳಗೊಂದು ನಂಬಿಕೆ'<br>ಕೃತಿಯ ಕುರಿತು ಉಪನ್ಯಾಸ | ಡಾ. [illegible] ಪ್ರಕಾಶ್<br>ಶ್ರೀ [illegible] ಕಸ್ತೂರಿ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 3 | 9.7.06 | ಉಪನ್ಯಾಸ-ತಿಳಿಹಾಸ್ಯದೊಂದಿಗೆ ತಿಳಿ ಮಾತುಗಳು | ಡಾ.ಕೆ.ಪಿ.ಪುತ್ತೂರಾಯ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 4 | 13.8.06 | ಶ್ರೀ ಡಾ. [illegible] ನಾಟಕೃತಿ [illegible] ಗೋಷ್ಠಿ ಮತ್ತು ಬಲ್ಲಾಳರಿಗೆ ಸನ್ಮಾನ | [illegible]<br>[illegible]<br>ಶ್ರೀ ಶ್ರೀ [illegible]<br>ಐ.ಎಮ್.ವಿಠ್ಠಲಮೂರ್ತಿ<br>ಭಾ.ಆ.ಸೇ<br>ಡಾ. ಎಸ್.ವಿ.ಪ್ರಭಾವತಿ<br>ಶ್ರೀ ಮಹಾಬಲಮೂರ್ತಿ ಕೊಡ್ಲೆಕೆರ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 5 | 10.9.06 | ಉಪನ್ಯಾಸ-ಬೇಂದ್ರೆ ಕಾವ್ಯ ವೈಶಿಷ್ಟ್ಯ - ಕೆಲವು ಕವನಗಳು - ಒಂದು ನೋಟ | ಡಾ. ಎಸ್. ಜಿ. ಜೈನಾಪೂರ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 6 | 29.10.06 | ಶಿವರಾಮಕಾರಂತರ 105ನೇ ಹುಟ್ಟುಹಬ್ಬ ಮತ್ತು ಸುವರ್ಣ ಕರ್ನಾಟಕದಸಂಭ್ರಮ ಕಾರ್ಯಕ್ರಮದ ಅಂಗವಾಗಿ ಕರ್ನಾಟಕ ಕಲಾದರ್ಶಿನಿ(ರಿ) ಬಾಲಕಲಾವಿದರಿಂದ ವೀರ ವೃಷ ಸೇನೆ ಮತ್ತು ಕಂಸವಧೆ ಯಕ್ಷಗಾನ | ಜಸ್ಟೀಸ್. ಪಿ.ವಿಶ್ವನಾಥಶೆಟ್ಟಿ<br>ಪ್ರೊ. ಎಮ್. ಎಚ್. ಕೃಷ್ಣಯ್ಯ | ತರಳಬಾಳು ಕೇಂದ್ರ | ಆದರ್ಶ ವಿದ್ಯಾಸಂಸ್ಥೆ ಆರ್.ಟಿ.ನಗರ ಸಾಂಸ್ಕೃತಿಕ ಸಂಘ |
| 7 | 19.11.06 | ಕನ್ನಡ ಕಲಿಕಾ ಕೇಂದ್ರದ ಉದ್ಘಾಟನೆ | ಶ್ರೀ.ಬಿ.ಪಾರ್ಥಸಾರಥಿ<br>ಭಾ.ಆ.ಸೇ (ನಿವೃತ್ತ) | ಆದರ್ಶ ಕಾಲೇಜು ಬೆಂಗಳೂರು | ಲಕ್ಷ್ಮೀನಾರಾಯಣ ಚಿಡಗ ಮೆಮೋರಿಯಲ್ ಚಾರಿಟೇಬಲ್ ಟ್ರಸ್ಟ್ |
| 8. | 10.12.06 | ಉಪನ್ಯಾಸ-ಡಾ. ಎಸ್. ಎಲ್. ಭೈರಪ್ಪನವರ ಬದುಕು-ಬರಹ | ಡಾ. ನಾಗರಾಜ್ ನೀರಗುಂದ | ತರಳಬಾಳು ಗ್ರಂಥಾಲಯ | ಮಂಥನ, ಹುಬ್ಬಳ್ಳಿ |
| 9. | 11.2.07 | ಪ್ರೇಮಾಭಟ್ ದತ್ತಿ ನಿಧಿ ಉಪನ್ಯಾಸ-ಕನ್ನಡ ಸಣ್ಣಕತೆಗಳಲ್ಲಿ ಸ್ತ್ರೀವಾದ | ಶ್ರೀಮತಿ ಶಾಂತಾಕುಮಾರಿ | ತರಳಬಾಳು ಗ್ರಂಥಾಲಯ | ತರಳಬಾಳು ಕೇಂದ್ರ |
| 10. | 18.2.07 | ಗೋಪಾಲಕೃಷ್ಣ ಅಡಿಗರ 90ನೇ ಹುಟ್ಟುಹಬ್ಬ | ಡಾ. ಯು. ಆರ್. ಅನಂತಮೂರ್ತಿ<br>ಡಾ.ಚಂದ್ರಶೇಖರ ಕಂಬಾರ<br>ಕಿ.ರಂ.ನಾಗರಾಜ್, ಸಿ.ಆರ್.ಸಿಂಹ,<br>ಪ್ರತಿಭಾನಂದಕುಮಾರ್<br>ಡಾ.ಚಿರಂಜೀವಿ ಸಿಂಗ್, ಟಿ.ಜಿ.ರಾಘವ<br>ಎಸ್.ದಿವಾಕರ, ಚ.ಹ.ರಘುನಾಥ<br>ಬಿ.ವಿ.ಕೆದಿಲಾಯ,<br>ಎಸ್.ಆರ್.ವಿಜಯಶಂಕರ | ಸುಚಿತ್ರಾ ಫಿಲಂ ಸೊಸೈಟಿ | ಸುಚಿತ್ರಾ ಕಲಾಕೇಂದ್ರ ಬನಶಂಕರಿ 2ನೇ ಹಂತ ಮತ್ತು ಗೋಪಾಲಕೃಷ್ಣ ಅಡಿಗ ಟ್ರಸ್ಟ್ |
| 11 | 10.3.07 | ಅಡಿಗರ ಕಾವ್ಯವ್ಯಾಸಂಗಗೋಷ್ಠಿ ಕಾವ್ಯರಚನಾಕಮ್ಮಟ "ಮದುವೆ ಮದುವೆ" ಹಾಸ್ಯ ನಾಟಕ<br><br>ಋತ್ವಿಕ್ ಸಿಂಹ ಅವರ ನಿರ್ದೇಶನದಲ್ಲಿ 'ಮದುವೆ' 'ಮದುವೆ' ಎಂಬ ಹಾಸ್ಯನಾಟಕ | ಡಾ.ಎಸ್.ಎಸ್.ಲಕ್ಷ್ಮೀನಾರಾಯಣ ಭಟ್ಟ<br>ಡಾ.ಸಿ.ಎನ್.ರಾಮಚಂದ್ರನ್<br>ಡಾ. ಅಣ್ಣಪ್ಪ<br>ಶ್ರೀ.ಬಿ.ವಿ.ಕೆದಿಲಾಯ<br>ಶ್ರೀ ಎಸ್.ಆರ್.ವಿಜಯಶಂಕರ್<br>ಡಾ.ಎಚ್.ಎಸ್.ವೆಂಕಟೇಶಮೂರ್ತಿ<br>ಪ್ರೊ.ಬಿ.ಆರ್.ಲಕ್ಷ್ಮಣರಾವ್<br>ಪ್ರೊ.ಜಿ.ಎಸ್.ಸಿದ್ದಲಿಂಗಯ್ಯ<br>ಡಾ.ಸುಮತೀಂದ್ರ ನಾಡಿಗ್<br><br>ಶ್ರೀ ಸಿ.ಆರ್.ಸಿಂಹ | ತರಳಬಾಳು ಗ್ರಂಥಾಲಯ<br><br>ತರಳಬಾಳು ಗ್ರಂಥಾಲಯ ಮುಖ್ಯ ಸಭಾಂಗಣ | ತರಳಬಾಳು ಕೇಂದ್ರ<br><br>ತರಳಬಾಳು ಕೇಂದ್ರ |

ನಮ್ಮ ಸಾಸ್ತಾನ ಶಾಖೆಯು ದಿನಾಂಕ 2.10.06ರಂದು ಹಂಗಾರಕಟ್ಟೆ ಸಾಸ್ತಾನ ರೋಟರಿ ಕ್ಲಬ್, ಬ್ರಹ್ಮಾವರ-ಬಾರ್ಕೂರು ಲಯನ್ಸ್ ಮತ್ತು ಲಯನೆಸ್ ಕ್ಲಬ್, ಇನ್ನರ್ ವ್ಹೀಲ್ ಕ್ಲಬ್ ಕೋಟ-ಸಾಲಿಗ್ರಾಮ ಸಂಸ್ಥೆಗಳ ಸಹಯೋಗದೊಂದಿಗೆ ಪಾಂಡೇಶ್ವರ ಶಿವರಾಮಕಾರಂತ ರಂಗ ಸ್ಥಳದಲ್ಲಿ ವೈದ್ಯಕೀಯ ಶಿಬಿರವನ್ನು ನಡೆಸಿತು. ಶಿಬಿರವನ್ನು ಶ್ರೀ. ಕೆ.ಜಯಪ್ರಕಾಶ ಹೆಗ್ಡೆ ವಿಧಾನಸಭಾ ಸದಸ್ಯರು ಬ್ರಹ್ಮಾವರ ಕ್ಷೇತ್ರ ಇವರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ನಮ್ಮ ಸಂಸ್ಥೆಯ ಕಾರ್ಯದರ್ಶಿಗಳಾದ ಪ್ರಾ. ಚಂದ್ರಶೇಖರ ಚಡಗರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು.

ಈ ಬಹುತೇಕ ಕಾರ್ಯಕ್ರಮಗಳು ತುಂಬಾ ಯಶಸ್ವಿಯಾಗಿ ನಡೆದವು. ವರದಿವರ್ಷದಲ್ಲಿ ಕರ್ನಾಟಕ ಕಲಾದರ್ಶಿನಿ (ರಿ) ಇವರು ನಮ್ಮ ಸಂಸ್ಥೆಯ ಸಹಯೋಗದೊಂದಿಗೆ ದಿನಾಂಕ 1.09.06ರಂದು ತರಳಬಾಳು ಕೇಂದ್ರದಲ್ಲಿ ಯಕ್ಷಗಾನ ಗುರುಕುಲವನ್ನು ತೆರೆದರು. ಆರು ವಿದ್ಯಾರ್ಥಿಗಳು ಸೇರ್ಪಡೆಯಾಗಿ ಆರು ತಿಂಗಳಲ್ಲಿ ಯಕ್ಷಗಾನದಲ್ಲಿ ತರಬೇತಿ ಪಡೆದರು. ಆದರ್ಶ ಕಾಲೇಜಿನಲ್ಲಿ ನಾವು ಆರಂಭಿಸಿದ ಕನ್ನಡ ಕಲಿಕಾಕೇಂದ್ರಕ್ಕೂ ನಿರೀಕ್ಷಿಸಿದಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳೂ, ನಡೆಸಿ ಕೊಡಲು ಅಧ್ಯಾಪಕರು ಸಿಗದೆ ಕಲಿಕಾಕೇಂದ್ರವನ್ನು ಒಂದು ಕೋರ್ಸಿನ ನಂತರ ಮುಂದುವರೆಸಿಕೊಂಡು ಹೋಗಲು ಸಾಧ್ಯವಾಗಿಲ್ಲ.

ಈ ವರ್ಷ ಹಣತೆಯ ನಾಲ್ಕೂ ಸಂಚಿಕೆಗಳು ಪ್ರಕಟಗೊಂಡವು. ಇದಕ್ಕಾಗಿ ಶ್ರಮಿಸಿದ ಗೌರವ ಸಂಪಾದಕ ಶ್ರೀ.ಬಿ.ವಿ.ಕೆದಿಲಾಯರಿಗೂ, ಪತ್ರಿಕೆಯ ಡಿ.ಟಿ.ಪಿ. ಮತ್ತು ಮುದ್ರಣವನ್ನು ಕೈಗೊಂಡ ರವಿಸ್ಕ್ರೀನ್‌ನ ಶ್ರೀ ಸತ್ಯನಾರಾಯಣ ಅವರಿಗೂ ಜಾಹೀರಾತುದಾರರಿಗೂ ಲೇಖಕರಿಗೂ ನಾವು ಚಿರಋಣಿ. ಹಣತೆಯನ್ನು ರಿಜಿಸ್ಟ್ರಾರ್ ಆಫ್ ನ್ಯೂಸ್ ಪೇಪರ್ ಅವರ ಕಛೇರಿಯಲ್ಲಿ ನೋಂದಾಯಿಸುವ ದಿಸೆಯಲ್ಲಿ ನಾವೀಗ ಕಾರ್ಯಪ್ರವೃತ್ತರಾಗಬೇಕಾಗಿದೆ. ನಮ್ಮ ಸಂಸ್ಥೆಯ ಲೆಕ್ಕ ಪತ್ರದ ತಪಾಸಣೆಯನ್ನು ಎಂದಿನಂತೆ ಉಚಿತವಾಗಿ ಮಾಡಿರುವ ಶರತ್ ಚಂದ್ರ ಮತ್ತು ಕಂಪೆನಿ ಅವರಿಗೂ ತಮ್ಮ ಕಾರ್ಯಕ್ರಮಗಳಿಗೆ ಸ್ಥಳಾವಕಾಶವನ್ನು ಒದಗಿಸಿರುವ ತರಳಬಾಳು ಕೇಂದ್ರದ ಮುಖ್ಯಸ್ಥರಾದ ಶ್ರೀ.ಡಾ.ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳಿಗೂ ಆದರ್ಶ ಶೈಕ್ಷಣಿಕ ಸಂಸ್ಥೆಯ ಶ್ರೀಮತಿ ರಾಧಾರಾಮಸ್ವಾಮಿಯವರಿಗೂ ನಮ್ಮ ಅನಂತಾನಂತ ಕೃತಜ್ಞತೆಗಳು. ಈ ವರ್ಷ

ನಮಗೆ ರೂ.15.000/- ದೇಣಿಗೆಯನ್ನು ಕೊಟ್ಟ ಡಾ. ಪ್ರದ್ಯುಮ್ನ ಅಡಿಗರಿಗೂ ಹಾಗೂ ಗೋಪಾಲಕೃಷ್ಣ ಅಡಿಗರ ಕುರಿತ ಕಾರ್ಯಕ್ರಮ ನಡೆಸಲು ನೆರವಾದ ಶ್ರೀ ಜಯರಾಮ ಅಡಿಗರಿಗೂ ನಾವು ಆಭಾರಿಗಳು. ಈಗಾಗಲೇ ಕಾಣಿಸಿದಂತೆ ನಾವು ಹಲವಾರು ಕಾರ್ಯಕ್ರಮಗಳನ್ನು ಇತರ ಸಂಘಸಂಸ್ಥೆಗಳ ಸಹಯೋಗದೊಂದಿಗೆ ನಡೆಸಿದ್ದೇವೆ. ಆ ಎಲ್ಲ ಸಂಸ್ಥೆಗಳ ಪದಾಧಿಕಾರಿಗಳಿಗೆ ನಮ್ಮ ಧನ್ಯವಾದಗಳು.

ದಿನಾಂಕ 4.5.07 ರಲ್ಲಿ ಶ್ರೀಮತಿ ಪ್ರೇಮಾಭಟ್ಟರ ಕಥಾವರ್ಷದ ಬಿಡುಗಡೆಯ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾಗಿದ್ದ ಶ್ರೀ.ಮಹಾದೇವ ಪ್ರಸಾದ್ ಅವರು ಕೊಟ್ಟ ಆಶ್ವಾಸನೆಯಂತೆ ಬೆಂಗಳೂರಿನಲ್ಲಿ ಶಿವರಾಮಕಾರಂತ ಭವನದ ನಿರ್ಮಾಣದ ಸಲುವಾಗಿ ನಮ್ಮ ಪ್ರಯತ್ನಗಳನ್ನು ತೀವ್ರಗೊಳಿಸಬೇಕಾಗಿದೆ. ಸರ್ಕಾರವು ಬೆಂಗಳೂರಿನಲ್ಲಿ ನಿರ್ಮಿಸಲು ಉದ್ದೇಶಿಸಿರುವ ಶಿವರಾಮ ಕಾರಂತ ಬಡಾವಣೆಯಲ್ಲಿ ಕನಿಷ್ಠ ಒಂದು ಎಕರೆ ಜಾಗವನ್ನು ಶಿವರಾಮ ಕಾರಂತ ಭವನಕ್ಕೆ ಕಾದಿರಿಸುವಂತೆ ಸರ್ಕಾರವನ್ನು ಒತ್ತಾಯಿಸಬೇಕಾಗಿದೆ.

ದಿನಾಂಕ 10.3.07 ರಂದು ನಾವು ನಡೆಸಿದ ಕಾರ್ಯಕ್ರಮಕ್ಕೆ ಕರ್ನಾಟಕ ಸರಕಾರದಿಂದ ಮಂಜೂರಾದ ಹಣ 20,000 ರೂ. ಧನಸಹಾಯ ಇನ್ನೂ ನಮ್ಮ ಕೈ ಸೇರಿಲ್ಲ. ಇಲಾಖೆಗೆ ನಾವು ಸಲ್ಲಿಸಿದ ವಿವರಗಳ ಕಡತವೇ ಕಳೆದುಹೋಗಿ ಅದನ್ನು ಇನ್ನೊಮ್ಮೆ ಸಲ್ಲಿಸಬೇಕಾಗಿದೆ. ಸಂಸ್ಥೆಯ ಪತ್ರ ವ್ಯವಹಾರಗಳನ್ನು ನೋಡಿಕೊಳ್ಳಲು ಕಂಪ್ಯೂಟರ್ ಜ್ಞಾನವನ್ನು ಹೊಂದಿರುವ ಅರೆಕಾಲಿಕ ನೌಕರರೊಬ್ಬರನ್ನು ನಿಯಮಿಸಿಕೊಳ್ಳಬೇಕಾಗಿದೆ. ನಮ್ಮ ಕಾರ್ಯಕ್ರಮಕ್ಕೆ ಅಗತ್ಯವಿರುವ ಪೋಡಿಯಂ ಮತ್ತು ಧ್ವನಿವರ್ಧಕಗಳನ್ನು ನಾವೇ ಖರೀದಿಸಬೇಕಾಗಿದೆ. ಸಂಸ್ಥೆಗೆ ಹೊಸಹೊಸ ಸದಸ್ಯರ ಸೇರ್ಪಡೆಯೊಂದಿಗೆ ಹೆಚ್ಚುವರಿ ಚಂದಾ ತೆತ್ತು ಆಜೀವಸದಸ್ಯರು ದಾನಿಸದಸ್ಯರಾಗಿಯೂ, ದಾನಿ ಸದಸ್ಯರು ಪೋಷಕ ಸದಸ್ಯರಾಗಿಯೂ ಸಹಕರಿಸಿದರೆ ನಮ್ಮ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಾಧ್ಯ. ಸಂಸ್ಥೆಗೆ ಕೊಟ್ಟ ದೇಣಿಗೆಗಳಿಗೆ ಆದಾಯ ಕರದ ವಿಧಿ 80 G ಯಂತೆ ರಿಯಾಯಿತಿ ಇದೆ. ವರದಿ ವರ್ಷದಲ್ಲಿ ನಮ್ಮ ಸದಸ್ಯರಾದ ಶ್ರೀ ಸಿ.ಆರ್.ಸತ್ಯ ಅವರು ತಮ್ಮ ತಾತ ಹೊಸ ಕನ್ನಡದ ಬೆಳವಣಿಗೆಗೆ, ಕನ್ನಡಿಗರ ಮನೋವಿಕಾಸಕ್ಕೆ ಕಾರಣೀಭೂತರಾಗಿದ್ದ ದಿವಂಗತ ಶ್ರೀ ಎ.ಆರ್.ಕೃಷ್ಣಶಾಸ್ತ್ರಿಗಳ ಸವಿನೆನಪಿಗೆ ರೂ.10,000/ ವನ್ನು ದೇಣಿಗೆ ಇತ್ತು ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ. ಈ ಹಣದ ಬಡ್ಡಿಯಿಂದ ಪ್ರತಿವರ್ಷ ಕೃಷ್ಣಶಾಸ್ತ್ರಿಗಳ

ನೆನಪಿನಲ್ಲಿ ಉಪನ್ಯಾಸ ಕಾರ್ಯಕ್ರಮವನ್ನು 2008ನೆಯ ಇಸವಿಯಿಂದ ನಡೆಸಲಿದ್ದೇವೆ.

ದಿನಾಂಕ 17.1.2008 ಕ್ಕೆ ವೇದಿಕೆ ಹದಿನೈದು ವರ್ಷಗಳ ಸಾರ್ಥಕ ಅಸ್ತಿತ್ವವನ್ನು ಮುಗಿಸಿ ಹದಿನಾರನೆಯ ವರ್ಷಕ್ಕೆ ಕಾಲಿಡಲಿದೆ. ನವ ಯೌವ್ವನದ ಹುರುಪಿನಿಂದ ಈ ಸಂಸ್ಥೆ ಕೆಲಸ ಮಾಡಲು ಸಕಲ ಸದಸ್ಯರ ಸಹಕಾರವನ್ನು ಕೋರುತ್ತಿದ್ದೇನೆ. ನಮ್ಮ ಹದಿನೈದನೇ ವಾರ್ಷಿಕೋತ್ಸವವನ್ನು ಒಂದು ಸಾಹಿತ್ಯೋತ್ಸವವಾಗಿ ಮಾಡುವ ಹಾಗೂ ಈ ಸಂದರ್ಭದಲ್ಲಿ ಈಗ ಕೆಲವು ಕಾಲದಿಂದ ಸ್ಥಗಿತಗೊಂಡಿದ್ದ ಪ್ರಕಟಣೆಯ ಕೆಲಸವನ್ನು ಮತ್ತೊಮ್ಮೆ ಕೈಗೊಳ್ಳಬೇಕೆಂಬ ಹಂಬಲ ನಮ್ಮದು. ನಿಮ್ಮ ಬೆಂಬಲ ಇದ್ದಲ್ಲಿ ನಮ್ಮ ಕನಸು ನೆನಸಾದೀತು.

ಕರ್ನಾಟಕದ ಆದ್ಯಂತವೂ ನಡೆದ ಸುವರ್ಣ ಕರ್ನಾಟಕದ ಆಚರಣೆ, ಕನ್ನಡ ಪರ ಹೋರಾಟಗಳಲ್ಲಿ ತೊಡಗಿದ ನೂರಾರು ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಹೋರಾಟಗಾರರ ಪ್ರಯತ್ನ ಮತ್ತು ಸರಕಾರದಿಂದ ಕನ್ನಡದ ಉಳಿವು ಮತ್ತು ಬೆಳವಣಿಗೆಗೆ ಸಹಾಯದ ಧಾರಾಳ ಭರವಸೆಗಳ ನಡುವೆಯೂ ಕನ್ನಡ ಕಳೆದು ಹೋಗುತ್ತದೆಯೋ ಎನ್ನುವ ಭಯ ನಮ್ಮನ್ನೆಲ್ಲ ಕಾಡುತ್ತಿದೆ. ಯುವ ಪೀಳಿಗೆ ಇಂಗ್ಲಿಷ್ ಮಾಧ್ಯಮದ ಆಕರ್ಷಣೆಗೆ ಒಳಗಾಗಿ ನಮ್ಮ ಭಾಷೆ ಮತ್ತು ಸಂಸ್ಕೃತಿಗಳಿಂದ ವಿಮುಖರಾಗುತ್ತಿರುವುದು ಒಳ್ಳೆಯ ಲಕ್ಷಣವಲ್ಲ. ಈ ದಿಸೆಯಲ್ಲಿ ನಾವೇನು ಮಾಡಬಹುದೆಂದು ಮಹಾಸಭೆ ಚರ್ಚಿಸಲಿ ಎಂದು ಹಾರೈಸುತ್ತಾ ನನ್ನ ವರದಿಯನ್ನು ಮುಗಿಸುತ್ತೇನೆ.

**ಬೆಂಗಳೂರು**
**14.10.07**



## ಶಿವರಾಮ ಕಾರಂತ ವೇದಿಕೆ (ರಿ.)

ನಂ307, 17ನೆಯ ಅಡ್ಡರಸ್ತೆ, ರವೀಂದ್ರನಾಥ ಟಾಗೋರ್ ನಗರ

ಬೆಂಗಳೂರು - 560032

### 1.4.2006ರಿಂದ 31.3.2007ರ ತನಕದ ಜಮಾ-ಖರ್ಚಿನ ಪಟ್ಟಿ

| ಹಿಂದಿನ ವರ್ಷ (ರೂ.) | ಜಮಾ | | ರೂ. | ಹಿಂದಿನ ವರ್ಷ (ರೂ.) | ಖರ್ಚು | | ರೂ. |
|---|---|---|---|---|---|---|---|
| | ವರ್ಷದ ಆರಂಭದ ಶಿಲ್ಕು | | | | | | |
| 199.63 | ನಗದು ಕೈಯಲ್ಲಿ | 211.13 | | 10001.50 | ಮುದ್ರಣ ಮತ್ತು ಸ್ಟೇಷನರಿ | | 33528.00 |
| 20,629.97 | ದೇನಾ ಬ್ಯಾಂಕಿನಲ್ಲಿ | 18716.97 | 18928.10 | 1447.00 | ಅಂಚೆ ವೆಚ್ಚ | | 3784.00 |
| 12,500.00 | ಆಜೀವ ಸದಸ್ಯತ್ವದಿಂದ | | 4500.00 | 28545.00 | ಕಾರ್ಯಕ್ರಮಗಳ ಬಗ್ಗೆ ತಗಲಿದ ವೆಚ್ಚ | | 81404.50 |
| 7001.00 | ದಾನಿ ಸದಸ್ಯತ್ವದಿಂದ | | [illegible] | 0.00 | ವರದಿಯನ್ನು ರಿಜಿಸ್ಟ್ರಾರರಿಗೆ ಸಲ್ಲಿಸಿದ ಬಗ್ಗೆ | | 700.00 |
| 0.00 | ಪೋಷಕ ಸದಸ್ಯತ್ವದಿಂದ | | [illegible] | 460.00 | ಇತರ ಖರ್ಚುಗಳು | | 1370.00 |
| 0.00 | ಎ.ಆರ್.ಕೃಷ್ಣಶಾಸ್ತ್ರಿ ಸ್ಮಾರಕ ದತ್ತಿನಿಧಿಯಿಂದ | | 10000.00 | 0.00 | ಬ್ಯಾಂಕು ವೆಚ್ಚ | | 11.00 |
| 5951.00 | ದೇಣಿಗೆಗಳಿಂದ | | 41526.00 | 1200.00 | ಗೌರವಧನ | | 2800.00 |
| 4651.00 | ಬ್ಯಾಂಕಿನ ನಿರಖು ಠೇವಣಿಗಳಿಂದ ಬಡ್ಡಿ | | 5954.00 | 1550.00 | ಕಾರ್ಯದರ್ಶಿಗಳ ಸಾಲ ಮರುಪಾವತಿ | | 4500.00 |
| 714.00 | ಬ್ಯಾಂಕಿನ ಉಳಿತಾಯ ಖಾತೆಯಿಂದ ಬಡ್ಡಿ | | 733.00 | 25000.00 | ನಿರಖು ಠೇವಣಿ | | 20000.00 |
| 5175.00 | (ಅರ್ಧ ಅಪಾರ್ಥ) ಪುಸ್ತಕ ಮಾರಾಟದಿಂದ | | [illegible] | 0.00 | ಆದಾಯಕರ ಮೂಲದಲ್ಲಿ ಕಡಿತ | | 190.00 |
| 18000.00 | ಕಾರ್ಯಕ್ರಮಗಳ ಪ್ರಾಯೋಜಕರಿಂದ | | [illegible] | | ಅಂತಿಮ ಶಿಲ್ಕು | | |
| 2310.00 | ಕಾರ್ಯದರ್ಶಿಗಳಿಂದ ಕೈ ಸಾಲ | | 5225.00 | 211.13 | ಕೈಯಲ್ಲಿ | 77.63 | |
| 10000.00 | ಜಾಹೀರಾತುಗಳಿಂದ | | [illegible] | 18716.97 | ದೇನಾಬ್ಯಾಂಕಿನಲ್ಲಿ | 65050.97 | 65128.60 |
| 87131.60 | ಒಟ್ಟು ಮೊತ್ತ | | 2.13.416.10 | 87131.60 | ಒಟ್ಟು ಮೊತ್ತ | | 213416.10 |

ಸಹಿಗಳು/- ಶ್ರೀಮತಿ ಪ್ರೇಮಾಭಟ್ — ಅಧ್ಯಕ್ಷೆ

ಪ್ರಾ. ಚಂದ್ರಶೇಖರ ಚಡಗ — ಕಾರ್ಯದರ್ಶಿ

ಎ.ವಾಸುದೇವ ರಾವ್ — ಖಜಾಂಚಿ

ಶರತ್ & ಕಂಪನಿ ಪರವಾಗಿ
ಎಸ್.ಎನ್.ಶರತ್ ಚಂದ್ರ
ಲೆಕ್ಕ ಪರಿಶೋಧಕರು

ಸ್ಥಳ : ಬೆಂಗಳೂರು
ದಿನಾಂಕ : 16-5-2007

## ಶಿವರಾಮ ಕಾರಂತ ವೇದಿಕೆ (ರಿ.)

ನಂ307, 17ನೆಯ ಅಡ್ಡರಸ್ತೆ, ರವೀಂದ್ರನಾಥ ಟಾಗೋರ್ ನಗರ

ಬೆಂಗಳೂರು – 560032.

### 1.4.2006 ರಿಂದ 31.3.2007ರ ತನಕದ ಆಯ-ವ್ಯಯ ಪಟ್ಟಿ

| ಹಿಂದಿನ ವರ್ಷ (ರೂ.) | ವ್ಯಯ | ರೂ. | ಹಿಂದಿನ ವರ್ಷ (ರೂ.) | ಆದಾಯ | ರೂ. |
|---|---|---|---|---|---|
| 7400.00 | ಪುಸ್ತಕ ಮತ್ತು ಸ್ಟೇಷನರಿ ಆರಂಭದ ಶಿಲ್ಕು | 5200.00 | 5951.00 | ದೇಣಿಗೆಯಿಂದ | 41526.00 |
| 10001.50 | ಮುದ್ರಣ ಮತ್ತು ಸ್ಟೇಷನರಿ ವೆಚ್ಚ | 33528.00 | 4651.00 | ನಿರಖು ಠೇವಣಿಗಳ ಮೇಲೆ ಬ್ಯಾಂಕಿನ ಬಡ್ಡಿ | 5954.00 |
| 1447.00 | ಅಂಚೆ ವೆಚ್ಚ | 3784.00 | 714.00 | ಉಳಿತಾಯ ಖಾತೆಯ ಮೇಲೆ ಬ್ಯಾಂಕಿನ ಬಡ್ಡಿ | 733.00 |
| 28545.00 | ಕಾರ್ಯಕ್ರಮದ ಬಗ್ಗೆ ತಗಲಿದ ವೆಚ್ಚ | 81404.50 | 10000.00 | ಜಾಹೀರಾತುಗಳಿಂದ | 67500.00 |
| 0.00 | ವರದಿಯನ್ನು ರಿಜಿಸ್ಟ್ರಾರರಿಗೆ ಸಲ್ಲಿಸಿದ ಬಗ್ಗೆ ಶುಲ್ಕ | 700.00 | 5175.00 | ಪುಸ್ತಕ ಮಾರಾಟದಿಂದ | 350.00 |
| 460.00 | ಇತರ ಖರ್ಚುಗಳು | 1370.00 | 18000.00 | ಕಾರ್ಯಕ್ರಮಗಳ ಪ್ರಾಯೋಜಕರಿಂದ | 22000.00 |
| 0.00 | ಬ್ಯಾಂಕು ಖರ್ಚು | 11.00 | 5200.00 | ಪುಸ್ತಕ ಮತ್ತು ಸ್ಟೇಷನರಿಗಳ ಅಂತಿಮ ಶುಲ್ಕು | 6500.00 |
| 1200.00 | ಗೌರವ ಧನ ಮತ್ತು ಪ್ರಯಾಣ ಭತ್ತೆ | 2800.00 | | | |
| 637.50 | ವ್ಯಯಕ್ಕಿಂತ ಹೆಚ್ಚಾದ ಆದಾಯ | 15765.50 | | | |
| 49691.0 | ಒಟ್ಟು ಮೊತ್ತ | 144563.00 | 49691.00 | ಒಟ್ಟು ಮೊತ್ತ | 144563.00 |

ಸಹಿಗಳು/- ಶ್ರೀಮತಿ ಪ್ರೇಮಾಭಟ್ — ಅಧ್ಯಕ್ಷೆ

ಪಾ. ಚಂದ್ರಶೇಖರ ಚಡಗ — ಕಾರ್ಯದರ್ಶಿ

ಎ.ವಾಸುದೇವ ರಾವ್ — ಖಜಾಂಚಿ

ಶರತ್ & ಕಂಪನಿ ಪರವಾಗಿ
ಎಸ್.ಎನ್.ಶರತ್ ಚಂದ್ರ
ಲೆಕ್ಕ ಪರಿಶೋಧಕರು

ಸ್ಥಳ : ಬೆಂಗಳೂರು
ದಿನಾಂಕ : 16-5-2007

## ಶಿವರಾಮ ಕಾರಂತ ವೇದಿಕೆ (ರಿ.)

ನಂ307, 17ನೆಯ ಅಡ್ಡರಸ್ತೆ, ರವೀಂದ್ರನಾಥ ಟಾಗೋರ್ ನಗರ

ಬೆಂಗಳೂರು - 560032.

### 31.3.2007 ಕ್ಕೆ ಇದ್ದಂತೆ ಆಸ್ತಿ ಮತ್ತು ಜವಾಬ್ದಾರಿಯ ಪಟ್ಟಿ

| ಹಿಂದಿನ ವರ್ಷ (ರೂ.) | ಜವಾಬ್ದಾರಿಗಳು | ರೂ. | ಹಿಂದಿನ ವರ್ಷ (ರೂ.) | ಆಸ್ತಿಗಳು | ರೂ. |
|---|---|---|---|---|---|
| | ಬಂಡವಾಳ ನಿಧಿ | | 90000.00 | ನಿರಖು ಠೇವಣಾತಿ | 1,10,000.00 |
| | ಆರಂಭದಲ್ಲಿ | 1,13,368.10 | 0.00 | ಮೂಲದಲ್ಲಿ ಮುರಿದ ಆದಾಯಕರ | 190.00 |
| | ವ್ಯಯಕ್ಕಿಂತ ಹೆಚ್ಚಿದ ಆದಾಯ | 15,765.50 | 5200.00 | ಪ್ರಕಟಣೆ ಮತ್ತು ಸ್ಟೇಷನರಿಗಳ ಅಂತಿಮ ಶಿಲ್ಕು | 6500.00 |
| | | 1,29,133.60 | | | |
| | | | 18716.97 | ಬ್ಯಾಂಕಿನಲ್ಲಿ | 65,050.97 |
| | ಆಜೀವಸದಸ್ಯತ್ವದಿಂದ | 4500.00 | 211.13 | ನಗದು ಶಿಲ್ಕು | 77.63 |
| | ದಾನಿ ಸದಸ್ಯತ್ವದಿಂದ | 16700.00 | | | |
| | ಪೋಷಕ ಸದಸ್ಯತ್ವದಿಂದ | 20000.00 | | | |
| 1,13,368.10 | ಒಟ್ಟು ಮೊತ್ತ | 1,70,333.60 | | | |
| 0.00 | ಎ.ಆರ್.ಕೃಷ್ಣಶಾಸ್ತ್ರಿ ಸ್ಮಾರಕ ದತ್ತಿ ನಿಧಿಯಿಂದ | 10000.00 | | | |
| 760.00 | ಕಾರ್ಯದರ್ಶಿಗಳಿಂದ ಸಾಲ | 1485.00 | | | |
| 1,14,128.10 | ಒಟ್ಟು ಮೊತ್ತ | 1,81,818.60 | 1,14,128.10 | ಒಟ್ಟು ಮೊತ್ತ | 1,81,818.60 |

ಸಹಿಗಳು/- ಶ್ರೀಮತಿ ಪ್ರೇಮಾಭಟ್ — ಅಧ್ಯಕ್ಷೆ

ಪ್ರಾ. ಚಂದ್ರಶೇಖರ ಚಡಗ — ಕಾರ್ಯದರ್ಶಿ

ಎ.ವಾಸುದೇವ ರಾವ್ — ಖಜಾಂಚಿ

ಶರತ್ & ಕಂಪನಿ ಪರವಾಗಿ

ಎಸ್.ಎನ್.ಶರತ್ ಚಂದ್ರ

ಲೆಕ್ಕ ಪರಿಶೋಧಕರು

ಸ್ಥಳ : ಬೆಂಗಳೂರು

ದಿನಾಂಕ : 16-5-2007

